## Bengaluru South



Vijayanagar Local Association organized Scouts-Guides Annual Rally & Cubs and Bulbuls utsav on January 20 at Siddaganga Public School, Chadra Layout, Bengaluru. Total Pacticipants along with unit leaders were 1180. Various activities were conducted to promote scouting skills.



Sri P.G.R. Sindhia, State Chief Commissioner, Sri M. Krishnappa, Minister of Housing, Government of Karnataka and office bearers of the district were present in the valedictory function.

### ಬೆಳಗಾವಿ

ಡಿಸೆಂಬರ್ 31,2017 ರಂದು ಕೆ.ಎಲ್.ಇ.ಎಮ್.ಎಮ್. ಶಾಲೆಯ ಶ್ರೀ 'ಬಸವೇಶ್ವರ' ಸ್ಕೌಟ್ಸ್ ತಂಡದವರು ಬೆಳಗಾವಿ ಜಿಲ್ಲೆಯ ವಿವಿಧ ನಾಲ್ಕು ಸ್ಥಳಗಳಿಗೆ ಪ್ರಯಾಣ ಮಾಡಿ 240 ಕಿ.ಮೀ. ದೂರ ಕ್ರಮಿಸಿ 'ಹೈಕರ್' ಬ್ಯಾಡ್ಜ್ ಪೂರೈಸಿದರು. ಇವರ ಈ ಚಟುವಟಿಕೆಗೆ ಶಾಲಾ ಪ್ರಾಚಾರ್ಯರಾದ ಶ್ರೀಮತಿ ಅನುಪಾ ಕೌಶಿಕ್ ಮತ್ತು ಸ್ಕೌಟ್ ಮಾಸ್ಟರ್ ಶ್ರೀ ಪಿ. ವಾಯ್. ಪಾಟೀಲ ಮಾರ್ಗದರ್ಶನ ಮಾಡಿದರು.



* ಜನವರಿ 7 ರಿಂದ 11 ರ ವರೆಗೆ ಬೆಳಗಾವಿಯ ಜೈನ್ ಹೆರಿಟೇಜ್ ಶಾಲೆಯಲ್ಲಿ ಭಾರತ್ ಸ್ಕೌಟ್ಸ್-ಗೈಡ್ಸ್ ರಾಷ್ಟ್ರೀಯ ಸಂಸ್ಥೆಯವರು ರಾಷ್ಟ್ರಮಟ್ಟದ 'ರಾಷ್ಟ್ರೀಯ ಭಾವೈಕ್ಯತಾ' ಶಿಬಿರವನ್ನು ಏರ್ಪಡಿಸಿದ್ದರು. ಈ ಶಿಬಿರದಲ್ಲಿ ರಾಷ್ಟ್ರಮಟ್ಟದ ಸಾಂಸ್ಕೃತಿಕ ಸ್ಪರ್ಧೆಗಳನ್ನು ಹಮ್ಮಿಕೊಂಡಿದ್ದರು. ಜನವರಿ 9 ರಂದು ನಡೆದ ರಾಷ್ಟ್ರಮಟ್ಟದ 'ರಸಪ್ರಶ್ನೆ' ಕಾರ್ಯಕ್ರಮದಲ್ಲಿ ಕೆ.ಎಲ್.ಇ.ಎಮ್.ಎಮ್. ಶಾಲೆಯ ಗೈಡ್ಸ್ ವಿದ್ಯಾರ್ಥಿನಿಯರಾದ ಕು॥ ಸಹನಾ ಮುಂಗರವಾಡಿ ಮತ್ತು ಕುಮಾರಿ ಯಶಸ್ವಿ ನಂದಗಾವಿ ಇವರು ಪ್ರಥಮ ಸ್ಥಾನ ಪಡೆದು ಶಾಲೆಗೆ ಮತ್ತು ನಾಡಿಗೆ ಕೀರ್ತಿಯನ್ನು ತಂದುಕೊಟ್ಟಿದ್ದಾರೆ.



* ಜನವರಿ 3 ರಂದು ಸ॥ ಪ॥ ಪೂ॥ ಮಹಾವಿದ್ಯಾಲಯ, ಬೈಲಹೊಂಗಲ ಇಲ್ಲಿ ಕ್ರಾಂತಿವೀರ ಸಂಗೊಳ್ಳಿ ರಾಯಣ್ಣ ರೋವರ್ ದಳ ಉದ್ಘಾಟಿಸಲಾಯಿತು. ಶ್ರೀ ಎಚ್.ಆರ್. ಪಾಟೀಲ, ಉಪನ್ಯಾಸಕರು ಸ್ವಾಗತ ಮಾಡಿದರು. ಜ್ಞಾನದೇವತೆ ಶಾರದಾಮಾತೆಯ ಮೂರ್ತಿಗೆ ಪೂಜೆ ಸಲ್ಲಿಸಿ, ಸ್ಕೌಟ್ ದಳದ ಉದ್ಘಾಟನೆ ನೆರವೇರಿಸಲಾಯಿತು.

ಮುಖ್ಯ ಅತಿಥಿಗಳ ಸಂಕ್ಷಿಪ್ತ ಪರಿಚಯವನ್ನು ಶ್ರೀ ಬಿ.ಜಿ. ಪುರಾಣಿಕ ಮಠ, ಉಪನ್ಯಾಸಕರು ಮಾಡಿಕೊಟ್ಟರು. ಪ್ರಾಸ್ತಾವಿಕವಾಗಿ ಮಾತನಾಡಿದ ಶ್ರೀ ಎ.ಎಲ್. ಮಜ್ಜಿಗಿಯವರು, ಸ್ಕೌಟ್ಸ್ ಮತ್ತು ಗೈಡ್ಸ್ ನಡೆದುಬಂದ ದಾರಿ ಹಾಗೂ ಅದರ ಪ್ರತಿಜ್ಞೆಯ ಕುರಿತು ಮಾತನಾಡಿ ವಿದ್ಯಾರ್ಥಿಗಳಿಗೆ ಪ್ರತಿಜ್ಞಾ ವಿಧಿಯನ್ನು ಬೋಧಿಸಿದರು. ಅತಿಥಿಗಳಾದ ಶ್ರೀ ಪಿ.ವಿ. ಪಾಟೀಲರವರು ಸ್ಕೌಟ್ಸ್ ಸಂಕೇತ, ಕೈ ಕುಲುಕುವುದು ಮತ್ತು ವಂದನೆ ಸಲ್ಲಿಸುವ ವಿಧಾನಗಳ ಜೊತೆಗೆ ಕ್ರಾಂತಿವೀರ ಸಂಗೊಳ್ಳಿ ರಾಯಣ್ಣನ ಧೈರ್ಯ, ಸಾಹಸ ಹೋರಾಟದ ಕುರಿತು ಹೇಳುತ್ತಾ ವಿದ್ಯಾರ್ಥಿಗಳಿಗೆ ಸ್ಫೂರ್ತಿ ತುಂಬಿದರು.

ಮತ್ತೋರ್ವ ಅತಿಥಿಗಳಾದ ಶ್ರೀ ಈಶ್ವರ ಮೇಟಿರವರು ತಮ್ಮ ಸೇವಾ ಅವಧಿಯಲ್ಲಿ ಎನ್.ಸಿ.ಸಿ. ಮತ್ತು ಸ್ಕೌಟ್ಸ್ ತರಬೇತಿಗಳಲ್ಲಿ ಪಡೆದ ಕಾರ್ಯಚಟುವಟಿಕೆಗಳ ಅನುಭವವನ್ನು ನೀಡುತ್ತಾ ದೇಶದ ರಕ್ಷಣೆಗೆ ನಾವೆಲ್ಲರೂ ಸದಾ ಸಿದ್ಧರಾಗಿರಬೇಕು ಎಂಬುದನ್ನು ಮನವರಿಕೆ ಮಾಡಿದರು.

ಮುಖ್ಯ ಅತಿಥಿಗಳಾದ ಶ್ರೀ ಬಿ.ಜಿ. ಜನಕಟ್ಟಿಯವರು, ವಿದ್ಯಾರ್ಥಿಗಳಿಗೆ ಸ್ಕೌಟ್ಸ್ ದಳ ಸೇರ್ಪಡೆಯಾಗುವುದರಿಂದ ವೈಯಕ್ತಿಕ ಲಾಭಗಳು ಮತ್ತು ಕೇಂದ್ರ-ರಾಜ್ಯ ಸರಕಾರಿ ಉದ್ಯೋಗ ನೇಮಕಾತಿಗಳಲ್ಲಿ ಮೀಸಲಾತಿ ಕುರಿತು ತಿಳಿಸುತ್ತಾ ಸ್ಕೌಟ್ಸ್ ಸಂಸ್ಥೆ ನಡೆಸುವ ವಿವಿಧ ಪರೀಕ್ಷೆಗಳ ಮಾಹಿತಿ ನೀಡಿದರು.

ಕಾರ್ಯಕ್ರಮದ ಅಧ್ಯಕ್ಷ ಭಾಷಣ ಮಾಡಿದ, ಪ್ರಭಾರಿ ಪ್ರಾಚಾರ್ಯರಾದ ಎಂ.ಬಿ. ಇಂಗಳಗಿರವರು ಸ್ಕೌಟ್ಸ್-ಗೈಡ್ಸ್ ಚಟುವಟಿಕೆಗಳಲ್ಲಿ ವಿದ್ಯಾರ್ಥಿಗಳು ಸಕ್ರಿಯವಾಗಿ ತೊಡಗಿಸಿಕೊಂಡು, ಅದರ ಸದುಪಯೋಗ ಮಾಡಿಕೊಳ್ಳಬೇಕೆಂದು ತಿಳಿಸಿದರು. ಶ್ರೀ ಎಸ್.ಎನ್. ಕರ್ಕಿ ಉಪನ್ಯಾಸಕರು, ವಂದನಾರ್ಪಣೆ ಗೈದರು. ಕಾರ್ಯಕ್ರಮದ ನಿರೂಪಣೆಯನ್ನು ಶ್ರೀ ಬಿ.ಎಫ್. ಕುರಿ, ಉಪನ್ಯಾಸಕರು ಮಾಡಿದರು.

* ಜನವರಿ 21 ರಂದು "ನ್ಯಾಷನಲ್ ಲೆವೆಲ್ ಫಾಯರ್ ಮತ್ತು ಇವ್ಯಾಕ್ಯುಏಶನ್ ಡ್ರಿಲ್ ಇನ್ ಸ್ಕೂಲ್ ಇನ್ ಕಂಟ್ರಿ" ಎಂಬ ಕಾರ್ಯಕ್ರಮದಡಿಯಲ್ಲಿ ಕೆ.ಎಲ್.ಇ. ಎಮ್.ಎಮ್. ಶಾಲೆಯ ಆವರಣದಲ್ಲಿ ಗೋಕಾಕ ಅಗ್ನಿಶಾಮಕ ದಳದ ಸಿಬ್ಬಂದಿಯವರಿಂದ "ಅಣುಕು" ಪ್ರದರ್ಶನ ಜರುಗಿತು. ಫಸ್ಟೇಡ್ ಕಮಿಟಿ, ಟ್ರಾನ್ಸ್ ಪೋರ್ಸ್ ಕಮಿಟಿಗಳನ್ನು ರಚಿಸಿ ಅವರಿಗೆ ಅವರ ಕಮಿಟಿಗೆ ಸಂಬಂಧಿಸಿದ ವಿಷಯಗಳ ಬಗ್ಗೆ ಮಾಹಿತಿ ಹಾಗೂ ತರಬೇತಿಯನ್ನು ನೀಡಿ ಸನ್ನದ್ಧಗೊಳಿಸಲಾಗಿತ್ತು. ಈ ಮೂಲಕ ವಿದ್ಯಾರ್ಥಿಗಳಿಗೆ ಅಗ್ನಿ ಆಕಸ್ಮಿಕಗಳಲ್ಲಿ ಪ್ರಾಣಹಾನಿ, ಆಸ್ತಿಹಾನಿ ಆಗುವ ಬಗ್ಗೆ ಅರಿವು ಮೂಡಿಸಿಈ ದಿಸೆಯಲ್ಲಿ ಅಗ್ನಿಸುರಕ್ಷತಾ ಕ್ರಮಗಳ ಬಗ್ಗೆ ತಿಳುವಳಿಕೆ ನೀಡಿ ವಿದ್ಯಾರ್ಥಿ ಮಟ್ಟದಲ್ಲಿ ಅಗ್ನಿ ಮುನ್ನೆಚ್ಚರಿಕೆ, ಅಗ್ನಿ ಶಮನ ಮತ್ತು ಸುರಕ್ಷಿತ ನಿರ್ಗಮನ ವಿಷಯಗಳ ಬಗ್ಗೆ ಜಾಗೃತಿಯನ್ನು ಮೂಡಿಸಲಾಯಿತು.

ಗೋಕಾಕ ಅಗ್ನಿಶಾಮಕ ದಳದ ಠಾಣಾಧಿಕಾರಿಗಳಾದ ಶ್ರೀ ಎ.ಬಿ. ಪತ್ತಾರ, ಅವರ ಸಿಬ್ಬಂದಿ ವರ್ಗ, ಕೆ.ಎಲ್.ಇ. ಎಮ್.ಎಮ್. ಶಾಲೆಯ ಪ್ರಾಂಶುಪಾಲರಾದ ಶ್ರೀಮತಿ ಅನುಪಾ ಕೌಶಿಕ, ಶಾಲೆಯ ಶಿಕ್ಷಕ-ಶಿಕ್ಷಕೇತರ ಸಿಬ್ಬಂದಿ, ಶಾಲಾ ವಿದ್ಯಾರ್ಥಿಗಳು ಈ ಅಣುಕು ಪ್ರದರ್ಶನದಲ್ಲಿ ಉಪಸ್ಥಿತರಿದ್ದರು.

## ಚಾಮರಾಜನಗರ



ಡಿಸೆಂಬರ್ 23 ರಂದು ಹಸಿರು ಕರ್ನಾಟಕ ಅಭಿಯಾನದಡಿ "ನೀರಿಗಾಗಿ ಅರಣ್ಯ" ಶೀರ್ಷಿಕೆಯಡಿಯಲ್ಲಿ ಸಸಿ ನೆಡುವ ಕಾರ್ಯಕ್ರಮವನ್ನು ಸರ್ಕಾರಿ ಮಾದರಿ ಹಿರಿಯ ಪ್ರಾಥಮಿಕ ಶಾಲೆ ಉಪ್ಪಾರ ಬೀದಿ, ಚಾಮರಾಜನಗರ ಇಲ್ಲಿ ಹಮ್ಮಿಕೊಳ್ಳಲಾಗಿತ್ತು. ಉದ್ಘಾಟನೆಯನ್ನು ಚಾಮರಾಜನಗರ ಜಿಲ್ಲೆಯ ಮೂಡ್ಲುಪುರ ಗ್ರಾಮದ ಕಾಲೇಜು ಕುಮಾರ ಚಿತ್ರದ ನಾಯಕ ಶ್ರೀ ಸಂತೋಷ್‌ರವರು ಹಾಗೂ ದೀನ ಬಂಧು ಸಂಸ್ಥಾಪಕರಾದ ಶ್ರೀ ಜೈದೇವುರವರು ನೆರವೇರಿಸಿಕೊಟ್ಟರು.

ಇದೇ ಸಂದರ್ಭದಲ್ಲಿ ಸಂತೋಷ್‌ರವರು ಮಾತನಾಡಿ "ನಮ್ಮ ಪರಿಸರ ಈಗಾಗಲೇ ಅವನತಿಯ ಹಂತದಲ್ಲಿ ಇರುವುದು ವಿಪರ್ಯಾಸ ಹಾಗೂ ಉಸಿರಾಡುವ ಗಾಳಿಯು ಸಹ ಕಶ್ಮಲಗೊಂಡಿದೆ. ಇದರ ಉಳಿವಿಗಾಗಿ ಸಸಿಗಳನ್ನು ನೆಡುವುದು ಅತ್ಯವಶ್ಯಕವಾಗಿದೆ ಎಂದರು.

ದೀನ ಬಂಧು ಸಂಸ್ಥಾಪಕರು ಮಾತನಾಡಿ "ಸಸಿಗಳನ್ನು ನೆಡುವುದು ಎಷ್ಟು ಅವಶ್ಯಕವೋ ಅದೇ ರೀತಿ ಅದನ್ನು ಪೋಷಿಸಿ ಬೆಳೆಸಿಕೊಂಡು ಹೋಗುವುದು ಅಷ್ಟೇಮುಖ್ಯ" ಎಂದು ಹೇಳಿದರು.

ಸಸಿ ನೆಡುವ ಕಾರ್ಯಕ್ರಮದಲ್ಲಿ ಸರ್ಕಾರಿ ಮಾದರಿ ಹಿರಿಯ ಪ್ರಾಥಮಿಕ ಶಾಲೆಯ 15 ಸ್ಕೌಟ್ಸ್-ಗೈಡ್ಸ್‌ಗಳು, ಜೈಹಿಂದ್ ಓಪನ್ ಕ್ರ್ಯೂ ರೋವರ್‌ಗಳು, ಶ್ರೀ ಪ್ರದೀಪ್ ಎಸ್. ರೋವರ್ ಸ್ಕೌಟ್ಸ್ ಲೀಡರ್. ಎನ್. ಅಶೋಕ ಕುಮಾರ್

ಜಿಲ್ಲಾ ಸಂಘಟಕರು (ಸ್ಕೌ), ಕು. ಕಮಲಮ್ಮ, ಜಿಲ್ಲಾ ಸಂಘಟನ ಆಯುಕ್ತರು(ಗೈ), ಜಿಲ್ಲಾ ತರಬೇತಿ ಆಯುಕ್ತರು ಶ್ರೀ ಮಹದೇವ ಸ್ವಾಮಿರವರು, ಶಾಲೆಯ ಶಿಕ್ಷಕರುಗಳು ಭಾಗವಹಿಸಿದ್ದರು.



* ಜನವರಿ 6, 2018 ರಂದು ವಿಶ್ವಶಾಂತಿ ನಿಕೇತನ ಆಶ್ರಮ ಬಿ.ಆರ್. ಹಿಲ್ಸ್‌ನಲ್ಲಿ ಒಂದು ದಿನದ ಸೇವಾ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿತ್ತು. ಶ್ರೀ ಪ್ರಣವಾನಂದ ಸ್ವಾಮೀಜಿ ಇವರು ತಮ್ಮ ವಿದ್ಯಾರ್ಥಿ ಜೀವನದಲ್ಲಿ ಸ್ಕೌಟ್ ಆಗಿರುವುದನ್ನು ನೆನಪಿಸಿಕೊಂಡರು. ಸ್ವಾಮೀಜಿಯವರು ಆಧ್ಯಾತ್ಮದ ಬಗ್ಗೆ ಮಕ್ಕಳಿಗೆ ತಿಳಿಸಿಕೊಟ್ಟರು ಮತ್ತು ಮಕ್ಕಳ ಜೊತೆ ಸಂವಾದ ಕಾರ್ಯಕ್ರಮ ನಡೆಸಿದರು. ಎಸ್.ಡಿ.ವಿ.ಎ. ಶಾಲೆ, ಯಳಂದೂರಿನ ಸ್ಕೌಟ್ಸ್/ಗೈಡ್ಸ್‌ಗಳು ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ, ಯಳಂದೂರು ಟೌನ್, ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನ ರೋವರ್ಸ್, ಜೈಹಿಂದ್ ಓಪನ್ ರೋವರ್ಸ್ ಭಾಗವಹಿಸಿದ್ದರು. ಶ್ರೀ ಪ್ರದೀಪ್ ಆರ್.ಎಸ್.ಎಲ್. ಜಿಲ್ಲಾ ಸಂಘಟಕರು (ಸ್ಕೌ/ಗೈ) ಶ್ರೀ ಎನ್. ಅಶೋಕ ಕುಮಾರ್, ಕು॥ ಕಮಲಮ್ಮ, ಯುವಶಕ್ತಿ ವೇದಿಕೆ ಕಾರ್ಯದರ್ಶಿ ಇತರರು ಹಾಜರಿದ್ದರು.

* ಡಿಸೆಂಬರ್ 16 ರಂದು ಚಾಮರಾಜನಗರ ಜಿಲ್ಲೆಯ ಮುಖ್ಯ ರೈಲ್ವೇ ಸ್ಟೇಷನ್‌ನಲ್ಲಿ ಸ್ವಚ್ಛ ಭಾರತ್ ಅಭಿಯಾನದಡಿಯಲ್ಲಿ ಸ್ವಚ್ಛತಾ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿತ್ತು. ರೈಲ್ವೆ ಸ್ಟೇಷನ್ ಮಾಸ್ಟರ್ ಶ್ರೀ ಬಾಲಮುರುಳಿರವರು ಹಸಿರು ನಿಶಾನೆಯನ್ನು ತೋರುವುದರ ಮೂಲಕ ಅಭಿಯಾನಕ್ಕೆ ಚಾಲನೆ ನೀಡಿ ಈ ರೀತಿಯ ಕಾರ್ಯಕ್ರಮಗಳನ್ನು ಸ್ಕೌಟ್ಸ್-ಗೈಡ್ಸ್ ಸಂಸ್ಥೆಯವರು ಹಮ್ಮಿಕೊಂಡು ಜನರಿಗೆ ಅರಿವು ಮೂಡಿಸುವ ಕೆಲಸ ಶ್ಲಾಘನೀಯ ಎಂದರು. ಈ ಅಭಿಯಾನದಲ್ಲಿ ಸಂತ ಪೌಲ್ ಪ್ರೌಢ ಶಾಲೆಯ ನಾಲ್ಕು (4) ಸ್ಕೌಟ್ಸ್, ಸರ್ಕಾರಿ ಮಾದರಿ ಹಿರಿಯ ಪ್ರಾಥಮಿಕ ಶಾಲೆಯ 4 ಸ್ಕೌಟ್ಸ್‌ಗಳು, ಜೈಹಿಂದ್ ಓಪನ್ ರೋವರ್ ಕ್ರ್ಯೂನ 3 ರೋವರ್ಸ್‌ಗಳು ಭಾಗವಹಿಸಿದ್ದರು. ಇದೇ ಸಂದರ್ಭದಲ್ಲಿ ಜಿಲ್ಲಾ ಸಂಘಟಕರು (ಸ್ಕೌ) ಶ್ರೀ ಎನ್. ಅಶೋಕ ಕುಮಾರ್, ಕುಮಾರಿ ಕಮಲಮ್ಮ, ಜಿಲ್ಲಾ ಸಂಘಟನಾ ಆಯುಕ್ತರು(ಗೈ) ರವರ ನೇತೃತ್ವ ವಹಿಸಿದ್ದರು.

## ಚಿತ್ರದುರ್ಗ

* ಡಿಸೆಂಬರ್ 16 ರಂದು ಎಸ್.ಆರ್.ಎಸ್. ಕಾಲೇಜ್ ಆವರಣದಲ್ಲಿ ಅಂತರಾಷ್ಟ್ರೀಯ ಸಂಸ್ಥೆಯ ವ್ಯಾಗ್ಸ್ ಕಾರ್ಯಕ್ರಮವಾದ "ಸರ್ಫ್ ಸ್ಮಾರ್ಟ್" ಕಾರ್ಯಾಗಾರವನ್ನು ಹಮ್ಮಿಕೊಳ್ಳಲಾಗಿತ್ತು. ಈ ಕಾರ್ಯಾಗಾರದ ಅಧ್ಯಕ್ಷತೆಯನ್ನು ಶ್ರೀ ಎಂ. ರೇವಣಸಿದ್ದಪ್ಪ, ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ಹಾಗೂ ಜಿಲ್ಲಾ ಮುಖ್ಯ ಆಯುಕ್ತರು, ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ಚಿತ್ರದುರ್ಗ ಇವರು ವಹಿಸಿದ್ದರು. ಶ್ರೀ ಬಿ.ಎ. ಲಿಂಗಾರೆಡ್ಡಿ ಜಿಲ್ಲಾ ಕಾರ್ಯದರ್ಶಿರವರು ಸಸಿಗೆ ನೀರು ಎರೆಯುವುದರ ಮೂಲಕ ಉದ್ಘಾಟಿಸಿದರು. ಶ್ರೀಮತಿ ಸುನೀತಾ ಮಲ್ಲಿಕಾರ್ಜುನ್ ಜಿಲ್ಲಾ ಆಯುಕ್ತರು (ಗೈಡ್ಸ್), ಶ್ರೀ ಸಿ.ಆರ್. ಮೊಹಮ್ಮದ್ ಮೊಹೀನುದ್ದೀನ್, ಎ.ಡಿ.ಸಿ. (ಸ್ಕೌಟ್ಸ್), ಶ್ರೀಮತಿ ಸಿ.ಪಿ. ಸುಶೀಲಾ ಜಿಲ್ಲಾ ತರಬೇತಿ ಆಯುಕ್ತರು ಉಪಸ್ಥಿತರಿದ್ದರು. ಶಿಬಿರದ ನಾಯಕರಾದ ಶ್ರೀ ಶೈಲೇಶ್ ಹಾಗೂ ಶ್ರೀ ಭರತ್‌ರವರು ಸರ್ಫ್ ಸ್ಮಾರ್ಟ್‌ದ ಬಗ್ಗೆ ಕಂಪ್ಯೂಟರ್ ಹಾಗೂ ಪಿ.ಪಿ.ಟಿ. ಮುಖಾಂತರ ಶಿಬಿರಾರ್ಥಿಗಳಿಗೆ ತರಬೇತಿಯನ್ನು ನೀಡಿದರು. ಶ್ರೀ ಟಿ. ಕರಿಸಿದ್ದಪ್ಪ ಜಿಲ್ಲಾ ಸಂಘಟಕರು ಪ್ರಾಸ್ತಾವಿಕ ನುಡಿಯನ್ನಾಡಿದರು. ಶ್ರೀಮತಿ ಆರ್. ಮಮತ ಹೆಚ್.ಕ್ಯೂ.ಸಿ. (ಗೈಡ್) ಇವರು ಎಲ್ಲರನ್ನು ಸ್ವಾಗತಿಸಿದರು. ಶ್ರೀ ಬಿ. ಗುರುಮೂರ್ತಿ ಎಲ್ಲರನ್ನು ವಂದಿಸಿದರು. 60 ಸ್ಕೌಟ್ಸ್, ಗೈಡ್ಸ್, 45 ರೋವರ್ಸ್, ರೇಂಜರ್ಸ್, 15 ದಳ ನಾಯಕ/ನಾಯಕಿಯರು 15 ಜಿಲ್ಲಾ ಪದಾಧಿಕಾರಿಗಳು ಭಾಗವಹಿಸಿದ್ದರು.



* ಜನವರಿ 3 ರಿಂದ 9 ರ ವರೆಗೆ ದೇವರಕೊಟ್ಟ, ಹಿರಿಯೂರು ತಾಲ್ಲೂಕು ಇಲ್ಲಿ ಶಿಕ್ಷಕ/ಶಿಕ್ಷಕಿಯರಿಗೆ ಸ್ಕೌಟ್ಸ್ ಮತ್ತು ಗೈಡ್ಸ್ ಮೂಲತರಬೇತಿ ಶಿಬಿರವನ್ನು ನಡೆಸಲಾಯಿತು, ಈ ಶಿಬಿರದ ಉದ್ಘಾಟನೆಯನ್ನು ವೇದಿಕೆಯಲ್ಲಿನ ಗಣ್ಯರಿಂದ ಸಸಿಗೆ ನೀರೆರೆಯುವುದರ ಮೂಲಕ ಉದ್ಘಾಟಿಸಲಾಯಿತು. ಸಮಾರಂಭದಲ್ಲಿ ಸ್ಥಳೀಯ ಸಂಸ್ಥೆಯ ಅಧ್ಯಕ್ಷರಾದ ಶ್ರೀ ಸುಂದರ ರಾಜ್ ರವರು ಅಧ್ಯಕ್ಷತೆಯನ್ನು ವಹಿಸಿದ್ದರು. ವೇದಿಕೆಯಲ್ಲಿ ಶ್ರೀ ಎಂ. ರೇವಣಸಿದ್ದಪ್ಪ ಉಪನಿರ್ದೇಶಕರು ಸಾರ್ವಜನಿಕ ಶಿಕ್ಷಣ ಇಲಾಖೆ, ಹಾಗೂ ಜಿಲ್ಲಾ ಮುಖ್ಯ ಆಯುಕ್ತರು ಭಾರತ್ ಸ್ಕೌಟ್ಸ್-ಗೈಡ್ಸ್ ಕರ್ನಾಟಕ, ಜಿಲ್ಲಾ ಸಂಸ್ಥೆ ಚಿತ್ರದುರ್ಗ ಇವರು ಮಾತನಾಡಿ ಮಕ್ಕಳಿಗೆ ಇದರಿಂದ ಒಳ್ಳೆಯ ಅನುಕೂಲಗಳಿವೆ ಅದನ್ನು ಶಿಕ್ಷಕರು ಕಲ್ಪಿಸಿಕೊಡಬೇಕು ಎಂದರು. ಶ್ರೀ ಬಿ.ಎ. ಲಿಂಗಾರೆಡ್ಡಿ ಜಿಲ್ಲಾ ಕಾರ್ಯದರ್ಶಿ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆ ಇವರು ಮಾತನಾಡಿ ತರಬೇತಿಯು ಬಹಳ ಉತ್ತಮವಾಗಿರುತ್ತದೆ. ಇದರ ಅನುಭವವನ್ನು ನೀವು ಕೊನೆಯ ದಿನ ಹೇಳುತ್ತೀರಾ ಎಂದು ಹೇಳಿದರು. ಶ್ರೀಮತಿ ಸುನೀತಾ ಮಲ್ಲಿಕಾರ್ಜುನ್ ಜಿಲ್ಲಾ ಆಯುಕ್ತರು(ಗೈಡ್ಸ್) ರವರು ಮಾತನಾಡಿ ಈ ತರಬೇತಿ ಬಹಳ ಉತ್ತಮವಾಗಿರುತ್ತದೆ, ತಾವೆಲ್ಲರು ಚೆನ್ನಾಗಿ ಕಲಿತು ತಮ್ಮ ಶಾಲೆಯಲ್ಲಿ ಮಕ್ಕಳಿಗೆ ಚೆನ್ನಾಗಿ ಕಲಿಸಿ ಎಂದು ಹೇಳಿದರು. ಡಾ॥ ರಹಮತ್ ಉಲ್ಲಾ, ಪ್ರಭಾರ ಜಿಲ್ಲಾ ಆಯುಕ್ತರು (ಸ್ಕೌಟ್ಸ್) ಇವರು ಮಾತನಾಡಿ ಇದರಲ್ಲಿ ಒಳ್ಳೆಯ ಅವಕಾಶಗಳಿವೆ ನೀವೆಲ್ಲಾ ಮನಸ್ಸು ಮಾಡಿ ಮಕ್ಕಳಿಗೆ ಅವಾರ್ಡ್‌ಗಳನ್ನು ಕೊಡಿಸಬೇಕು ಎಂದು ಹೇಳಿದರು. ಶ್ರೀ ಸುಂದರರಾಜ್ ಸ್ಥಳೀಯ ಸಂಸ್ಥೆಯ ಅಧ್ಯಕ್ಷರು ಹಾಗೂ ಈ ಸಮಾರಂಭದ ಅಧ್ಯಕ್ಷರು ಅಧ್ಯಕ್ಷತೆಯ ನುಡಿಯಲ್ಲಿ ಬಹಳ ದಿನದ ಬಯಕೆಯಂತೆ ಇಲ್ಲಿ ಈ ಮೂಲ ತರಬೇತಿಯನ್ನು ಹಮ್ಮಿಕೊಂಡಿದ್ದೇವೆ. ಈ ತರಬೇತಿ ಶಿಬಿರವು ಯಶಸ್ವಿಯಾಗಲಿ ಎಂದು ತಿಳಿಸಿದರು. ಪ್ರಾಸ್ತಾವಿಕ ನುಡಿಯನ್ನು ಶ್ರೀಮತಿ ಶಶಿಕಲಾ ರವಿಶಂಕರ್ ಎ.ಡಿ.ಸಿ. (ಗೈಡ್) ರವರು ಹೇಳಿದರು. ಈ ಶಿಬಿರದ ನಾಯಕರಾಗಿ ಶ್ರೀ ಎಸ್.ಎಸ್. ಹುಸೇನಿರವರು, ಶ್ರೀಮಂಜುನಾಥ ಹಾಗೂ ಶ್ರೀಮತಿ ಸಿ.ಪಿ. ಸುಶೀಲ ಇವರುಗಳು ವಹಿಸಿದ್ದರು. ಸ್ವಾಗತ ಶ್ರೀ ತಿಪ್ಪೇಸ್ವಾಮಿ ಸ್ಥಳೀಯ ಸಂಸ್ಥೆ ಕಾರ್ಯದರ್ಶಿ ನೆರವೇರಿಸಿದರು. ವಂದನಾರ್ಪಣೆಯನ್ನು ಶ್ರೀ ಭೀಮಣ್ಣ ಸ್ಕೌಟ್ ಶಿಕ್ಷಕರು ನೆರವೇರಿಸಿದರು.



* ಡಿಸೆಂಬರ್ 18 ರಿಂದ 24ರವರೆಗೆ ಬಿಳಿ ನೀರು ಚಿಲುಮೆ, ಶ್ರೀ ಗುರುತಿಪ್ಪೇರುದ್ರಸ್ವಾಮಿ ದೇವಸ್ಥಾನದ ಆವರಣ, ಕೊಂಡ್ಲಹಳ್ಳಿ, ಮೊಳಕಾಲ್ಮೂರು ತಾಲ್ಲೂಕು ಇಲ್ಲಿ ಜಿಲ್ಲಾ ಮಟ್ಟದ ಮೂಲ ತರಬೇತಿ ಶಿಬಿರವನ್ನು ಮೊಳಕಾಲ್ಮೂರು, ಚಳ್ಳಕೆರೆ ತಾಲ್ಲೂಕು ಶಿಕ್ಷಕ/ಶಿಕ್ಷಕಿ ಯರಿಗೆ ನಡೆಸಲಾಯಿತು. ಈ ಕಾರ್ಯಕ್ರಮವನ್ನು ಪ್ರಭಾರಿ ಕ್ಷೇತ್ರ ಶಿಕ್ಷಣಾಧಿಕಾರಿಗಳಾದ ಶ್ರೀ ಹನುಮಂತಪ್ಪ ಇವರು ಉದ್ಘಾಟಿಸಿ ಮಾತನಾಡುತ್ತಾ, ಮೌಲ್ಯಗಳಿಂದ ದೂರಾಗಿ ಸಂಕುಚಿತಗೊಳ್ಳುತ್ತಿರುವ ಬದುಕಿನಲ್ಲಿ ಶಿಸ್ತು, ರೂಢಿಸಲು ಸ್ಕೌಟ್ಸ್-ಗೈಡ್ಸ್ ಸಹಕಾರಿ ಎಂದು ತಿಳಿಸಿದರು. ಜಿಲ್ಲಾ ಕಾರ್ಯದರ್ಶಿಗಳು ಶ್ರೀ ಬಿ.ಎ. ಲಿಂಗಾರೆಡ್ಡಿಯವರು ಮಾತನಾಡಿ ಮಾಜಿ ಸಚಿವರು ಆದ ಶ್ರೀ ಪಿ.ಜಿ.ಆರ್. ಸಿಂಧ್ಯಾರವರು ಎರಡನೇ ಬಾರಿಗೆ ರಾಜ್ಯ ಸಂಸ್ಥೆಯ ಮುಖ್ಯ ಆಯುಕ್ತರಾದ ನಂತರ ರಾಜ್ಯದ ಪ್ರತಿ ತಾಲ್ಲೂಕಿಗೆ 50 ಸಾವಿರ ಅನುದಾನವನ್ನು ಸರ್ಕಾರದಿಂದ ವಿತರಿಸಲು ಕ್ರಮ ಕೈಗೊಂಡಿದ್ದಾರೆ. ಸಂಸ್ಥೆಯ ವತಿಯಿಂದ ಬರುವ ಜನವರಿ ತಿಂಗಳಲ್ಲಿ ಶಾಲಾ ಮಕ್ಕಳಿಗೆ ಉಚಿತ ಕರ್ನಾಟಕ ದರ್ಶನ ಪ್ರವಾಸ ಏರ್ಪಡಿಸಲಾಗಿದೆ ಎಂದರು. ಶ್ರೀಮತಿ ಸುನೀತಾ ಮಲ್ಲಿಕಾರ್ಜುನ್ ಜಿಲ್ಲಾ ಆಯುಕ್ತರು (ಗೈಡ್ಸ್) ರವರು ಮಾತನಾಡಿ ಸ್ಕೌಟ್ಸ್-ಗೈಡ್ಸ್ ಮಹತ್ವವನ್ನು ಮಕ್ಕಳಿಗೆ ಕಲಿಸುವ ಮೂಲಕ ದೇಶಕ್ಕೆ ಸತ್ಪ್ರಜೆಗಳನ್ನು ನೀಡುವಲ್ಲಿ ಶಿಕ್ಷಕರ ಪಾತ್ರ ಮಹತ್ತರವಾಗಿದೆ ಎಂದು ಹೇಳಿದರು. ಈ ಕಾರ್ಯಕ್ರಮದಲ್ಲಿ ಶ್ರೀ ರೇವಣ್ಣ, ಅಧ್ಯಕ್ಷರು, ಭಾರತ್ ಸ್ಕೌಟ್ಸ್-ಗೈಡ್ಸ್ ಸ್ಥಳೀಯ ಸಂಸ್ಥೆ ಮೊಳಕಾಲ್ಮೂರು ತಾಲ್ಲೂಕು, ಇವರು ಅಧ್ಯಕ್ಷೀಯ ಭಾಷಣದಲ್ಲಿ ಸ್ಕೌಟ್ಸ್-ಗೈಡ್ಸ್‌ನಲ್ಲಿ ತರಬೇತಿ ಪಡೆದು ತಾವುಗಳೆಲ್ಲಾ ತಮ್ಮ ಶಾಲೆಗಳ ಮಕ್ಕಳಲ್ಲಿ ದೇಶಪ್ರೇಮ, ಶಿಸ್ತು, ಸಂಯಮ, ನಾಯಕತ್ವದ ಗುಣಗಳ ಬಗ್ಗೆ ತಿಳಿಸುತ್ತಾ ದೇಶದ ಸತ್ಪ್ರಜೆಗಳಾಗಲು ತಾವೆಲ್ಲರೂ ಶ್ರಮವಹಿಸಿ ತಾಲ್ಲೂಕು ಬೆಳವಣಿಗೆಗೆ ಸಹಕರಿಸಿ ಎಂದು ತಿಳಿಸಿದರು.

ಶ್ರೀ ಎಂ. ರೇವಣ್ಣಸಿದ್ದಪ್ಪ, ಡಿ.ಡಿ.ಪಿ.ಐ., ಸಾರ್ವಜನಿಕ ಶಿಕ್ಷಣ ಇಲಾಖೆ ಹಾಗೂ ಜಿಲ್ಲಾ ಮುಖ್ಯ ಆಯುಕ್ತರು ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆ ಇವರು ಸಮಾರೋಪ ಸಮಾರಂಭದಲ್ಲಿ ಭಾಗವಹಿಸಿ ತಾವೆಲ್ಲರೂ ತಮ್ಮ ಶಾಲೆಗಳಲ್ಲಿ ದಳಗಳನ್ನು ರಚಿಸಿ ಮಕ್ಕಳಿಗೆ ಮೌಲ್ಯಾಧಾರಿತವಾದ ಸ್ಕೌಟ್ಸ್-ಗೈಡ್ಸ್ ವಿಷಯಗಳನ್ನು ತಿಳಿಸುತ್ತಾ ರಾಜ್ಯ ಪುರಸ್ಕಾರ, ರಾಷ್ಟ್ರಪತಿ ಪುರಸ್ಕಾರಗಳನ್ನು ಪಡೆಯಲು ತಾವುಗಳು ಕೂಡ ಮುಂದುವರೆದ ತರಬೇತಿಯನ್ನು ಪಡೆದು ವಿದ್ಯಾರ್ಥಿಗಳಿಗೆ ಉತ್ತಮ ಮಾರ್ಗದರ್ಶನವನ್ನು ನೀಡಿ ಎಂದು ತಿಳಿ ಹೇಳಿದರು. ಶ್ರೀಮತಿ ಸುನೀತಾ ಮಲ್ಲಿಕಾರ್ಜುನ್ ಜಿಲ್ಲಾ ಆಯುಕ್ತರು (ಗೈಡ್ಸ್) ಡಾ॥ ರಹಮತ್ ಉಲ್ಲಾ ರವರು ಪ್ರಭಾರೆ ಜಿಲ್ಲಾ ಆಯುಕ್ತರು(ಸ್ಕೌಟ್ಸ್) ಹಾಗೂ ಜಿಲ್ಲಾ ಸಹಕಾರ್ಯದರ್ಶಿ ಇತರರು ಭಾಗವಹಿಸಿದ್ದರು.

## ಚಿಕ್ಕಮಗಳೂರು

ಜನವರಿ 1 ರಂದು ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕಡೂರಿನ ರೋವರ್ಸ್-ರೇಂಜರ್ಸ್ ಘಟಕದ ಸ್ವಚ್ಛತಾ ಅಭಿಯಾನದಡಿಯಲ್ಲಿ ಸ್ವಚ್ಛತೆಯ ಬಗೆಗೆ ಜಾಗೃತಿಯನ್ನು ಮೂಡಿಸುವ ಆಶಯದಿಂದ ತಾಲ್ಲೋಕಿನ ಯಾತ್ರಾಸ್ಥಳವಾದ ಹೇಮಗಿರಿ ಗ್ರಾಮದಲ್ಲಿ ಒಂದು ದಿನದ ತರಬೇತಿ ಶಿಬಿರ ಹಾಗೂ ವಿಶೇಷ ಉಪನ್ಯಾಸ ಗೋಷ್ಠಿಗಳನ್ನು ಹಮ್ಮಿಕೊಳ್ಳಲಾಗಿತ್ತು. ವಿದ್ಯಾರ್ಥಿಗಳಿಂದ ದೇವಾಲಯದ ಸುತ್ತ-ಮುತ್ತ, ಶಾಲಾವಾತಾವರಣಗಳನ್ನು ಸ್ವಚ್ಛಗೊಳಿಸಲಾಯಿತು.

ಮಧ್ಯಾಹ್ನ ಅಲ್ಲಿನ ಶಾಲಾ ಆವರಣದಲ್ಲಿ ಎರಡು ಗೋಷ್ಠಿಗಳನ್ನು ನಡೆಸಲಾಯಿತು. ಯುವ ಸ್ಪಂದನ ಕಾರ್ಯಕ್ರಮದಡಿ ಶ್ರೀ ಶ್ರೀನಿವಾಸ್ ಅವರು ಸಂಪನ್ಮೂಲ ವ್ಯಕ್ತಿಗಳಾಗಿ ಭಾಗವಹಿಸಿ ಮಾತನಾಡುತ್ತಾ ಇಂದಿನ ಸಾಮಾಜಿಕ ಬದಲಾವಣೆಯಲ್ಲಿ ಯುವಕರ ಕಾರ್ಯ ಮಹತ್ವವಾಗಿರುವುದನ್ನು ವಿವರಿಸಿದರು. ವಿವೇಕಾನಂದರ ಆಶಯ ಹಾಗು ತತ್ವಗಳಡಿ ಬದುಕು ರೂಪಿಸಿಕೊಳ್ಳಬೇಕೆಂದು ಕರೆ ನೀಡಿದರು. ಪರಂಪರೆ ಮತ್ತು ಆಧುನಿಕತೆ ಎಂಬ ವಿಚಾರವಾಗಿ ನಿವೃತ್ತ ಪ್ರಾಂಶುಪಾಲರಾದ ಪ್ರೊ. ಕಪನಿಗೌಡ ಮಾತನಾಡಿದರು. ಪ್ರಾಂಶುಪಾಲರಾದ ಶ್ರೀ ಶ್ರೀಧರಬಾಬು ಎ.ಜಿ. ರೋವರ್ಸ್ ಲೀಡರ್ ಶ್ರೀ ದೊರೇಶ್, ಶ್ರೀ ಶಿವಕುಮಾರ್ ಜಿ.ಟಿ. ಪ್ರಾಧ್ಯಾಪಕರುಗಳು ಕಾಲೇಜಿನ ಎಲ್ಲಾ ಸಿಬ್ಬಂದಿ ವರ್ಗ ಹಾಜರಿದ್ದರು.

* ಆಧುನಿಕ ಜೀವನದ ಅವಿಭಾಜ್ಯ ಅಂಗವಾದ ಬೆಂಕಿಯು ಎಷ್ಟು ಉಪಯೋಗಕಾರಿಯೋ ಅಷ್ಟೇ ಆಘಾತಕಾರಿಯೂ ಕೂಡ. ತುರ್ತು ಪರಿಸ್ಥಿತಿಯಲ್ಲಿ ಮನೆಗಳಲ್ಲಿ ಮತ್ತು ಹೊರಗೆ ಆಗಬಹುದಾದ ಬೆಂಕಿ ಅನಾಹುತಗಳನ್ನು ತಡೆಯುವ ಮತ್ತು ನಿರ್ವಹಿಸುವ ಸಾಮಾನ್ಯ ಜ್ಞಾನದ ಅರಿವು ಎಲ್ಲರಿಗೂ ಇದ್ದಲ್ಲಿ ಬಹಳಷ್ಟು ಸಾವು ನೋವುಗಳನ್ನು ತಪ್ಪಿಸಬಹುದು ಎಂದು ಬೆಂಗಳೂರಿನ ಸ್ಮಾರ್ಟ್ ಅಕಾಡೆಮಿಯ ನಿರ್ದೇಶಕರಾದ ಡಾ. ಜಿ.ವಿ. ವೆಂಕಟೇಶ್ ನುಡಿದರು.

ಉಪ್ಪಳ್ಳಿಯ ಮಾಡೆಲ್ ಇಂಗ್ಲೀಷ್ ಪ್ರೌಢಶಾಲೆಯ ಕಿಪ್ಲಿಂಗ್ ಸ್ಕೌಟ್ ಮತ್ತು ಗೈಡ್ ಗ್ರೂಪಿನವರನ್ನು ಉದ್ದೇಶಿಸಿ ಸ್ಕೌಟ್-ಗೈಡ್‌ನ ಪ್ರಾವೀಣ್ಯತ ಪದಕವಾದ "ಫೈರ್‌ಮೆನ್" ಪದಕದ ಬಗ್ಗೆ ಮಾತನಾಡುತ್ತಿದ್ದರು. ಸಂಪನ್ಮೂಲ ವ್ಯಕ್ತಿ ಶ್ರೀ ಕಣಿಯಪ್ಪನ್ ಅವರು ಮಾತನಾಡಿ ವಿವಿಧ ರೀತಿಯ ಬೆಂಕಿಗಳಿಗೆ ಕಾರಣವಾಗುವ ಘನವಸ್ತು, ದ್ರವರೂಪದ ಇಂಧನಗಳು, ಇಂಧನದ ಅನಿಲಗಳು, ಲೋಹದಿಂದ ಮತ್ತು ವಿದ್ಯುಚ್ಛಕ್ತಿಯಿಂದ ಉಂಟಾಗಬಹುದಾದ ಬೆಂಕಿ ಅವಗಡಗಳ ಬಗ್ಗೆ ತಿಳಿಸುತ್ತಾ, ಅವುಗಳನ್ನು ನಂದಿಸುವ ರೀತಿಗಳನ್ನು ವಿವರಿಸಿದರು. ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಶಾಲಾ ಮುಖ್ಯಸ್ಥ ಶ್ರೀ ಎಂ.ಎನ್. ಷಡಕ್ಷರಿ ಮಾತನಾಡಿ ಪ್ರಥಮ ಚಿಕಿತ್ಸೆಯ ಸಾಮಾನ್ಯ ಜ್ಞಾನದ ಅರಿವು ಪ್ರತಿಯೊಬ್ಬರಿಗು ಇದ್ದಲ್ಲಿ ಸಾಕಷ್ಟು ಸಾವು ನೋವುಗಳನ್ನು ತಡೆಯಬಹುದು ಎಂದರು.

## ದಾವಣಗೆರೆ



ಡಿಸೆಂಬರ್ 3-2017 ರಂದು ಅನ್‌ಮೋಲ್ ಪಬ್ಲಿಕ್ ಶಾಲೆಯಲ್ಲಿ ರಕ್ತದಾನ ಶಿಬಿರವನ್ನು ಆಯೋಜಿಸಲಾಗಿತ್ತು. ಇದರಲ್ಲಿ ಅನ್‌ಮೋಲ್ ಪಬ್ಲಿಕ್ ಶಾಲೆಯ ಸ್ಕೌಟ್ಸ್-ಗೈಡ್ಸ್ ಬಾಪೂಜಿ ಓಪನ್ ಸ್ಕೌಟ್ ಟ್ರೂಪ್ ಹಾಗೂ ಮದರ್ ತೆರೆಸಾ ಓಪನ್ ಗೈಡ್ ಕಂಪನಿಯ ಮಕ್ಕಳು ಅಲ್ಲಿನ ಗ್ರಾಮಸ್ಥರಿಗೆ ರಕ್ತದ ಬಗ್ಗೆ ಮಾಹಿತಿ ನೀಡಿ ಅದರ ಮಹತ್ವವನ್ನು ತಿಳಿಸಿ ರಕ್ತದಾನದ ಮಾಡಲು ಪ್ರೇರೇಪಿಸಿದರು. ನಾಗನೂರು, ಶಿರಮಗೊಂಡನಳ್ಳಿ ಹಾಗೂ ಶಾಮನೂರು ಗ್ರಾಮಸ್ಥರುಗಳು ರಕ್ತದಾನ ಮಾಡಿದರು. ಸ್ಕೌಟ್ ಮಾಸ್ಟರ್‌ರಾದ ಶ್ರೀ ವಿಜಯ ಗೈಡ್ ಕ್ಯಾಪ್ಟನ್‌ರಾದ ಶ್ರೀಮತಿ ಸುಜಾತರವರು ರಕ್ತದಾನ ಮಾಡಿದರು.

* ಡಿಸೆಂಬರ್ 24-2017 ರಂದು ಹಿಮೊಫಿಲಿಯಾ ಸೊಸೈಟಿ ಮತ್ತು ಆಸ್ಪತ್ರೆಯಲ್ಲಿ ಬಗ್ಗೆ ಡಾ॥ ಅಮಿತ್ ಮತ್ತು ಶ್ರೀ ಮಾಲತೇಶ್ (ಸಹಾಯಕರು) ಇವರುಗಳ ಸಹಕಾರದೊಂದಿಗೆ ಶ್ರೀ ತರಳಬಾಳು ಜಗದ್ಗುರು ಸ್ಕೌಟ್ಸ್-ಗೈಡ್ಸ್, ಬಾಪೂಜಿ ಓಪನ್ ಸ್ಕೌಟ್ ಟ್ರೂಪ್ ಮತ್ತು ಮದರ್ ತೆರೆಸಾ ಓಪನ್ ಗೈಡ್ ಕಂಪನಿಯ ಹಾಗೂ ಸೆಂಟ್ ಪಾಲ್ಸ್ ಗರ್ಲ್ಸ್ ಸ್ಕೂಲ್ ಗೈಡ ಕಂಪನಿ ಪಾಲ್ಗೊಂಡು ಪ್ರಥಮ ಚಿಕಿತ್ಸೆ ಮತ್ತು ಅಂಬ್ಯುಲೆನ್ಸ್ ಪದಕಗಳ ಬಗ್ಗೆ ತಿಳಿದುಕೊಂಡರು ಸ್ಕೌಟ್ ಮಾಸ್ಟರ್‌ರಾದ ಶ್ರೀ ರವೀಂದ್ರಸ್ವಾಮಿ ಟಿ.ಎಂ. ಗೈಡ್ ಕ್ಯಾಪ್ಟನ್ ಆದ ಶ್ರೀಮತಿ ರಮ್ಯ ಹೆಚ್.ಎಂ. ಮತ್ತು ಪೋಷಕರು ಪಾಲ್ಗೊಂಡಿದ್ದರು.



* ಬಾಪೂಜಿ ಓಪನ್ ಸ್ಕೌಟ್ ಟ್ರೂಪ್‌ನ ಸ್ಕೌಟ್ಸ್‌ಗಳಾದ ದರ್ಶನ್ ಹಾಗೂ ದೀಪಕ್ ಮತ್ತು ಮದರ್ ತೆರೆಸಾ ಓಪನ್ ಗೈಡ್ ಕಂಪನಿಯ ಗೈಡ್ ಆದ ಕು॥ ಶ್ರೇಯಾ ಇವರುಗಳು ಗೋವಾದಲ್ಲಿ ನಡೆದಂತಹ ಎಸ್.ಸಿ.ಕೆ.ಎಫ್.ಐ ಇಂಟರ್ ನ್ಯಾಷನಲ್ ಕರಾಟೆ ಸ್ಪರ್ಧೆಯಲ್ಲಿ ಉತ್ತಮ. ಪ್ರದರ್ಶನವನ್ನು ನೀಡಿ ಬಂಗಾರ ಮತ್ತು ಬೆಳ್ಳಿ ಪದಕಗಳನ್ನು ಗಳಿಸಿರುತ್ತಾರೆ. ಇವರಿಗೆ ಬಾಪೂಜಿ. ಓಪನ್ ಸ್ಕೌಟ್ ಟ್ರೂಪ್‌ನ ಲೀಡರ್ ಆದ ಶ್ರೀ ರವೀಂದ್ರ ಸ್ವಾಮಿ ಟಿ.ಎಂ. ರವರು ಮದರೆ ತೆರೆಸಾ ಗೈಡ್ ಕಂಪನಿಯ ಗೈಡ್ ಕ್ಯಾಪ್ಟನ್ ಆದ ಶ್ರೀಮತಿ ರಮ್ಯಾ ರವರು ಅಭಿನಂದಿಸಿದರು.

## ಗದಗ

ಡಿಸೆಂಬರ್ 28 ರಂದು ಗುರುಭವನದಲ್ಲಿ ಪ್ರಾಥಮಿಕ ಹಾಗೂ ಪ್ರೌಢಶಾಲಾ ಮುಖ್ಯೋಪಾಧ್ಯಾಯರಿಗೆ ಮಾಹಿತಿ ಶಿಬಿರ ನಡೆಸಲಾಯಿತು. ಅಧ್ಯಕ್ಷತೆಯನ್ನು ಶ್ರೀ ನಂಜುಂಡಯ್ಯ, ಬಿ.ಇ.ಓ., ವಹಿಸಿದ್ದರು. ಶಿಬಿರದ ನಾಯಕತ್ವವನ್ನು ಶ್ರೀ ಹನುಮಾನ ಸಿಂಗ ಬ್ಯಾಳಿ ವಹಿಸಿದ್ದರು. ಶ್ರೀ ಸಾಂಠಿ, ಶ್ರೀ ಆರ್.ವಿ. ಕರಣಿ, ಶ್ರೀಮತಿ ಸಿ.ಪಿ. ಹಿರೇಮಠ ತಾಲ್ಲೂಕು ಕಾರ್ಯದರ್ಶಿ ಶ್ರೀ ನೈನಾಪುರ ಶ್ರೀ ಎ.ಎಸ್. ಶಿವುಕುಮಾರ, ಎ.ಎಸ್.ಓ.ಸಿ., ಶ್ರೀ ಜಿ.ಎ. ಪೂಜಾರ, ಜಿಲ್ಲಾ ಕಾರ್ಯದರ್ಶಿ ಭಾಗವಹಿಸಿದ್ದರು.

* ಡಿಸೆಂಬರ್ 29 ರಂದು ಭೂಮರೆಡ್ಡಿ ಕಾಲೇಜಿನಲ್ಲಿ ಪ್ರಾಥಮಿಕ ಹಾಗೂ ಪ್ರೌಢಶಾಲಾ ಮುಖ್ಯೋಪಾಧ್ಯಾಯರಿಗೆ ಮಾಹಿತಿ ಶಿಬಿರ ನಡೆಸಲಾಯಿತು. ಅಧ್ಯಕ್ಷತೆಯನ್ನು ಶ್ರೀ ನಂಜುಂಡಯ್ಯ, ಕ್ಷೇತ್ರ ಶಿಕ್ಷಣಾಧಿಕಾರಿಗಳು ವಹಿಸಿದ್ದರು. ಶಿಬಿರದ ನಾಯಕರಾಗಿ ಶ್ರೀ ಹನುಮಾನ ಸಿಂಗ್ ಬ್ಯಾಳಿ, ಎ.ಎಲ್.ಟಿ.(ಎಸ್) ಜಿಲ್ಲಾ ತರಬೇತಿ ಆಯುಕ್ತರು ವಹಿಸಿದ್ದರು. ಶ್ರೀ ಪಿ.ವಿ. ಕರಣಿ, ತಾಲ್ಲೂಕು ಕಾರ್ಯದರ್ಶಿ, ಬಿ.ಇ.ಓ., ಕಛೇರಿ ಸಿಬ್ಬಂದಿ ಹಾಗೂ ಶ್ರೀ ಎ.ಎಸ್. ಶಿವುಕುಮಾರ, ಶ್ರೀ ಜಿ.ಎ. ಪೂಜಾರ ಜಿಲ್ಲಾ ಕಾರ್ಯದರ್ಶಿ ಭಾಗವಹಿಸಿದ್ದರು.



* ಡಿಸೆಂಬರ್ 31 ರಂದು ಹೆಚ್.ಪಿ.ಎಸ್. ಮಲ್ಲಸಮುದ್ರ ಶಾಲೆಯ ಸಾವಿತ್ರಿಬಾಯಿ ಪುಲೆ ಕಂಪನಿಯ ಗೈಡ್ಸ್ ಕಂಪನಿ ವತಿಯಿಂದ ಹೊರ ಸಂಚಾರ ಹಮ್ಮಿಕೊಳ್ಳಲಾಯಿತು. ಮುಂಜಾನೆ 9-50ಕ್ಕೆ ಶಾಲೆಯಿಂದ ಹೊರಟ ಗೈಡ್ಸ್, ಗೈಡ್ ಕ್ಯಾಪ್ಟನ್ ಶ್ರೀಮತಿ ಪಿ.ವಿ. ಬೇವಿನಮರದ ಅವರ ಮಾರ್ಗದರ್ಶನದಂತೆ ವನವಿದ್ಯಾಸಂಕೇತಗಳನ್ನು ಬಳಸಿ ನಿಗದಿಪಡಿಸಿದ ಸ್ಥಳಕ್ಕೆ ಹೊರಟರು. 4 ಕಿ.ಮೀ. ದೂರದ ಅಸುಂಡಿ ಗ್ರಾಮದ ಶ್ರೀರಾಮ ಲಕ್ಷ್ಮಣ ದೇವಸ್ಥಾನ ತಲುಪಿದಾಗ 11.00 ಗಂಟೆ ನಂತರ ಸ್ವತಃ ಗೈಡ್‌ಗಳೇ ಒಲೆ ಹಚ್ಚಿ 40 ಜನಕ್ಕೆ ಆಗುವಂತೆ ರುಚಿಯಾದ ಪಲಾವ್ ತಯಾರಿಸಿದರು. ನಂತರ ಮಠದ ಆವರಣವನ್ನು ಸ್ವಚ್ಛಗೊಳಿಸಿ ಮಠದ ಗುರುಗಳಾದ ಶ್ರೀ ಪರಮೇಶ್ವರ ಸ್ವಾಮಿಗಳ ಸನ್ನಿಧಿಯಲ್ಲಿ ಧ್ವಜಾರೋಹಣ ಕಾರ್ಯಕ್ರಮ ನೆರವೇರಿಸಿದರು. ಈ ಸಮಯದಲ್ಲಿ ಜಿಲ್ಲಾ ಸಂಸ್ಥೆಯ ಸಹಕಾರ್ಯದರ್ಶಿಗಳಾದ ಶ್ರೀ ಜಿ.ಎಸ್. ಗೌಡರ, ಎಸ್.ಎಸ್.ಓಸಿ ಆದ ಶ್ರೀ ಶಿವುಕುಮಾರ, ತಾಲೂಕಾ ಸಹಕಾರ್ಯದರ್ಶಿಗಳಾದ ಶ್ರೀ ಕೆ.ಎಸ್. ಬಾಳಿಕಾಯಿ, ಗೈಡರುಗಳಾದ ಶ್ರೀಮತಿ ಎಫ್.ಎಂ. ಅಣ್ಣಿಗೇರಿ, ಶ್ರೀಮತಿ ಎ.ವಿ. ಯಾಳ್ವಾರ, ಶ್ರೀಮತಿ ಆರ್.ಎಮ್. ಗುಂಜಳ, ನಿರ್ದೇಶಕಿಯರಾದ ಶ್ರೀಮತಿ ಸುಧಾ ಬೇವಿನಮರದ, ಶಾಲೆಯ ಶಿಕ್ಷಕರಾದ ಶ್ರೀ ಎಸ್.ಜಿ. ರಾಮೇನಹಳ್ಳಿ, ಶಿಕ್ಷಕಿಯರಾದ ಶ್ರೀಮತಿ ಜೆ.ಆರ್. ಬೆಟಗೇರಿ ಉಪಸ್ಥಿತರಿದ್ದರು. ಊಟದ ನಂತರ ಅಭಿನಯ ಗೀತೆಗಳನ್ನು ಮಾಡಿಸಲಾಯಿತು. ಶ್ರೀ ವಿ.ಎನ್. ಬೇಂದ್ರೆ ಶಿಕ್ಷಕರು 30 ನಿಮಿಷ ನಗೆಹನಿ ಕಾರ್ಯಕ್ರಮವನ್ನು ನೀಡಿದರು. ಗೈಡ್ ಕ್ಯಾಪ್ಟನ್‌ರಾದ ಶ್ರೀಮತಿ ಪಿ.ವಿ. ಬೇವಿನಮರದ ಹೊರಸಂಚಾರದ ಹಿಮ್ಮಾಹಿತಿಯನ್ನು ಗೈಡ್‌ಗಳಿಂದ ಪಡೆದರು. ನಂತರ ಹೊರಸಂಚಾರದ ನಕಾಶೆಯನ್ನು ತಯಾರಿಸುವಂತೆ ತಿಳಿಸಿದರು.

* ಜನವರಿ 4 ರಿಂದ 10 ರ ವರೆಗೆ ಗದಗ ಜಿಲ್ಲಾ ಸಂಸ್ಥೆಯಿಂದ ಕೆ.ಹೆಚ್. ಪಾಟೀಲ ಸಭಾಭವನದಲ್ಲಿ ಮೂಲತರಬೇತಿ ಶಿಬಿರ ನಡೆಸಲಾಯಿತು. ಶಿಬಿರದ ನಾಯಕರಾಗಿ ಸ್ಕೌಟ್ ವಿಭಾಗಕ್ಕೆ ಶ್ರೀ ಹನುಮಾನಸಿಂಗ ಬ್ಯಾಳಿ, ಎ.ಎಲ್.ಟಿ. ಹಾಗೂ ಶ್ರೀ ಎನ್.ಹೆಚ್. ಜಾಧವ, ಎ.ಎಲ್.ಟಿ.(ಎಸ್.)ಗೈಡ್ ವಿಭಾಗಕ್ಕೆ ಶ್ರೀಮತಿ ಬಿ.ಡಿ. ಪವಾರ ಎಲ್.ಟಿ.(ಜಿ.) ಭಾಗವಹಿಸಿದ್ದರು. ಶ್ರೀಮತಿ ಸುಮಾಗರಗ, ಜಿಲ್ಲಾ ಆಯುಕ್ತರು (ಗೈಡ್) ಶ್ರೀ ಸುರೇಶ ಗರಗ, ಉಪಾಧ್ಯಕ್ಷರು ಶ್ರೀ ಭರಮಗೌಡರ ಉಪಾಧ್ಯಕ್ಷರು, ಶ್ರೀ ಜಿ.ಹೆಚ್. ಪುಜಾರ ಜಿಲ್ಲಾ ಕಾರ್ಯದರ್ಶಿ ಶ್ರೀ ಎ.ಎಸ್. ಶಿವುಕುಮಾರ ಎ.ಎಸ್.ಓ.ಸಿ., ಶ್ರೀ ಗಂಗಾಧರ ಗೌಡ ಪಾಟೀಲ ಖಜಾಂಚಿ, ಶ್ರೀ ಎಂ.ವಿ. ಪಾಟೀಲ ಸಹಕಾರ್ಯದರ್ಶಿ, ಶ್ರೀಮತಿ ಶೋಭಾ ಗೌಡರ ಜಂಟಿ ಕಾರ್ಯದರ್ಶಿ ಶ್ರೀ ಸುಂಠಿ ಐ.ವಿ. ಕರಾಶಿ ಶ್ರೀ ತೋಟಪ್ಪನವರ ಉಮೇಶ ಗಂಗಾಪುರ, ಶ್ರೀ ಬಾಳಿಕಾಯಿ, ಸಹನಾಯಕರು ಗೈಡ್ ವಿಭಾಗಕ್ಕೆ ಸಹನಾಯಕರಾಗಿ ಶ್ರೀಮತಿ ಗುಂಜಾಳ, ಶ್ರೀಮತಿ ಯಳವಾರ, ಶಿಬಿರಕ್ಕೆ ಭೇಟಿ ನೀಡಿದ್ದರು.

## ಹಾವೇರಿ

ರೋವರ್ ಲೀಡರ್ಸ್-ರೇಂಜರ್ ಲೀಡರ್ಸ್ ಹಾಗೂ ರೋವರ್ಸ್-ರೇಂಜರ್‌ಗಳಿಗೆ ಒಂದು ದಿನದ ಜಿಲ್ಲಾ ಮಟ್ಟದ **[Surf Smart Work Shop]** ಸರ್ಫ್ ಸ್ಮಾರ್ಟ್ ಕಮ್ಮಟವನ್ನು ಡಿಸೆಂಬರ್ 12 ರಂದು ಜಿ.ಎಚ್. ಕಾಲೇಜ್, ಪಿ.ಬಿ. ರೋಡ್, ಹಾವೇರಿಯಲ್ಲಿ ಸಂಘಟಿಸಲಾಯಿತು. ಶ್ರೀ ಎನ್. ಆಯ್, ಇಚ್ಚಂಗಿ ಜಿಲ್ಲಾ ಸ್ಕೌಟ್ಸ್ ಆಯುಕ್ತರು ಗಿಡಕ್ಕೆ ನೀರು ಎರೆಯುವುದರೊಂದಿಗೆ ಕಮ್ಮಟ ವನ್ನು ಉದ್ಘಾಟನೆ ಮಾಡಿದರು. ಶ್ರೀ ಎಸ್.ಬಿ. ನಾಡಗೌಡ್ರು ಪ್ರಾಚಾರ್ಯರು, ಜಿ.ಎಚ್. ಕಾಲೇಜ್, ಹಾವೇರಿ, ಶ್ರೀ ಮಲ್ಲಿಕಾರ್ಜುನ. ಕೊಟೂರ, ಜಿಲ್ಲಾ ಸ್ಥಾನಿಕ ಆಯುಕ್ತರು, ಶ್ರೀ ಆರ್.ಆರ್. ಕಾಶಪ್ಪನವರ, ಜಿಲ್ಲಾ ಕಾರ್ಯದರ್ಶಿ ಶ್ರೀ ರ.ವಿ. ಹಿಂಚಿಗೇರಿ, ಶ್ರೀ ಎಮ್.ಆರ್. ಪಾಟೀಲ್. ಡಿ.ಟಿ.ಸಿ., ಶ್ರೀ ಆರ್.ಡಿ.ಹೊಂಬರಡಿ, ಉದ್ಘಾಟನಾ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು. ಶಿಬಿರದ ನಾಯಕರಾಗಿ ಕು॥ ಹಾಮೀದ ಸೂರಣಗಿ, ತರಬೇತಿಯನ್ನು ನೀಡಿದರು. ಶಿಬಿರದಲ್ಲಿ 60 ರೋವರ್ಸ್, 30 ರೇಂಜರ್ಸ್, 28 ರೋವರ್ ಲೀಡರ್ಸ್, ರೇಂಜರ್

ಲೀಡರ್ಸ್, ಸ್ಕೌಟ್ ಮಾಸ್ಟರ್ಸ್ ಮತ್ತು ಗೈಡ್ ಕ್ಯಾಪ್ಟನ್ನರು ಭಾಗವಹಿಸಿದ್ದರು. ಶ್ರೀ ಎ.ಎಲ್. ಶೇಖಸೂರಣಗಿ, ಡಿ.ಓ.ಸಿ., ಕಾರ್ಯಕ್ರಮ ನಿರೂಪಣೆ ಮಾಡಿದರು. ಶ್ರೀ ಕೆ.ಎಚ್. ಬ್ಯಾಡಗಿ, ರೋವರ ಲೀಡರ್ ಸ್ವಾಗತ ಕೋರಿದರು. ಶ್ರೀಮತಿ ಕಣವಿ, ರೇಂಜರ್ ಲೀಡರ್ ವಂದನಾರ್ಪಣೆ ಮಾಡಿದರು.



* ಡಿಸೆಂಬರ್ 26 ರಿಂದ 29 ರ ವರೆಗೆ ಕರ್ನಾಟಕ ದರ್ಶನ ಹಮ್ಮಿಕೊಳ್ಳಲಾಯಿತು. ಪ್ರವಾಸದಲ್ಲಿ 125 ಸ್ಕೌಟ್ಸ್, 75 ಗೈಡ್ಸ್ ಹಾಗೂ 20 ಸಿಬ್ಬಂದಿಯವರು ಒಟ್ಟು 220, ನಾಲ್ಕು, ಕೆ.ಎಸ್.ಆರ್.ಟಿ.ಸಿ. ಬಸ್ಸುಗಳಲ್ಲಿ ಜಿಲ್ಲಾ ಗುರುಭವನ ಹಾವೇರಿಯಿಂದ ಪ್ರಯಾಣ ಬೆಳೆಸಿದರು. ಶ್ರೀಮತಿ ಮಾಧುರಿ ದೇವದರ ಜಿಲ್ಲಾ ಮುಖ್ಯ ಆಯುಕ್ತರು ಹಸಿರು ನಿಶಾನೆ ತೋರಿಸಿ ಪ್ರವಾಸಕ್ಕೆ ಚಾಲನೆ ನೀಡಿದರು. ಕಾರ್ಯಕ್ರಮದಲ್ಲಿ ಶ್ರೀ ಮಲ್ಲಿಕಾರ್ಜುನ ಕೊಟೂರ. ಸ್ಥಾನಿಕ ಆಯುಕ್ತರು. ಶ್ರೀ ಜಿ.ಹಿ. ಹಿರೇಗೌಡ್ರ. ಜಿಲ್ಲಾ ಖಜಾಂಚಿ, ಶ್ರೀ ಶರತ್ ಮಲ್ಲನಗೌಡ್ರ, ಶ್ರೀ ರವಿ ಹಿಂಚಿಗೇರಿ. ಶ್ರೀ ಎಮ್.ಆರ್. ಪಾಟೀಲ್ ಡಿ.ಟಿ.ಸಿ. ಎ.ಎಲ್. ಶೇಖಸೂರಣಗಿ ಡಿ.ಓ.ಸಿ ರವರು ಕಾರ್ಯಕ್ರಮದಲ್ಲಿ ಭಾಗವಹಿಸಿ ಪ್ರವಾಸ ಸುಖಕರವಾಗಲಿ ಹಾಗೂ ಯಶಸ್ವಿಯಾಗಲಿ ಎಂದು ಹಾರೈಸಿದರು.

ಹಾವೇರಿಯಿಂದ ಬೇಲೂರು, ಹಳೇಬೀಡು, ಶ್ರವಣಬೆಳಗೊಳ, ಕುಶಾಲನಗರ, ತಲಕಾಡು, ತಲಕಾವೇರಿ, ರಾಜಾಸೀಟ್, ಅಬ್ಬೇಫಾಲ್ಸ್, ಗೋಲ್ಡನ್ ಟೆಂಪಲ್, ಮೈಸೂರ, ಬೆಂಗಳೂರ, ನಾಲ್ಕು ದಿನಗಳ ಕಾಲ ಪ್ರವಾಸವನ್ನು ಯಶಸ್ವಿಗೊಳಿಸಿದರು.

* ಡಿಸೆಂಬರ್ 12 ರಂದು ಹಾನಗಲ್ಲ ತಾಲೂಕ ಸ.ಹಿ.ಪ್ರಾ. ಶಾಲೆ ಮಾರಬೀಡನಲ್ಲಿ ಗುಂಪು ನಾಯಕರ ತರಬೇತಿ ನಡೆಯಿತು. ಶ್ರೀ ಲಮಾಣಿ, ಅಧ್ಯಕ್ಷರು ಎಸ್.ಡಿ.ಎಂ.ಸಿ. ರವರು ದೀಪ ಬೆಳಗಿಸುವದರೊಂದಿಗೆ ಉದ್ಘಾಟನೆ ಮಾಡಿದರು. ಕಾರ್ಯಕ್ರಮದಲ್ಲಿ ಶ್ರೀ ಜಿ.ವಿ. ಹಿರೇಗೌಡ್ರ, ಆರ್. ಆರ್. ಕಾಶಪ್ಪನವರ, ಜಿಲ್ಲಾ ಕಾರ್ಯದರ್ಶಿ ಶ್ರೀ ಎಮ್.ಆರ್. ಪಾಟೀಲ, ಡಿ.ಟಿ.ಸಿ., (ಜಿ) ಶ್ರೀ ಪಿ.ಆರ್. ಚಿಕ್ಕಳ್ಳಿ, ತಾಲೂಕ ಕಾರ್ಯದರ್ಶಿ, ವೀಣಾ, ಕಮಾಟಿ, ಭಾಗವಹಿಸಿದ್ದರು. ಶಿಬಿರದಲ್ಲಿ 80 ಸ್ಕೌಟ್ಸ್, 35 ಗೈಡ್ಸ್ ಭಾಗವಹಿಸಿದ್ದರು. ತಾಲೂಕಿನ 23 ಜನ ಶಿಕ್ಷಕ/ಶಿಕ್ಷಕಿಯರು ಭಾಗವವಹಿಸಿದ್ದರು. ಶಿಬಿರದ ನಾಯಕರಾಗಿ ಶ್ರೀ ಎ.ಎಲ್. ಶೇಖಸೂರಣಗಿ, ಡಿ.ಓ.ಸಿ., ವಹಿಸಿದ್ದರು.

ಜನವರಿ 9 ರಂದು ಶಿಗ್ಗಾಂವ ತಾಲ್ಲೂಕ ಸ.ಹಿ.ಪ್ರಾ. ಶಾಲೆ ಗಂಗಿಬಾವಿನಲ್ಲಿ ಗುಂಪು ನಾಯಕರ ತರಬೇತಿ ಶಿಬಿರ ನಡೆಯಿತು. ಶ್ರೀ ವೈ. ಎಚ್. ಮುಲ್ಲಾ ಸಹಾಯಕ ಕಮಾಂಡೆಂಟ್ ಆಫ್ ಪೋಲಿಸ್ ರವರು ದೀಪ ಬೆಳಗಿಸುವದರೊಂದಿಗೆ ಉದ್ಘಾಟನೆ ಮಾಡಿದರು. ಕಾರ್ಯಕ್ರಮದಲ್ಲಿ ಶ್ರೀ ವೈ. ಎಚ್. ಪಾಟೀಲ್, ಡಿ.ಟಿ.ಸಿ. ಶ್ರೀ ಬಿ.ಬಿ. ಸೋಮಣ್ಣನವರ. ತಾಲೂಕ ಕಾರ್ಯದರ್ಶಿ, ಭಾಗವಹಿಸಿದ್ದರು. ಶಿಬಿರದಲ್ಲಿ 100 ಸ್ಕೌಟ್ಸ್, 40 ಗೈಡ್ಸ್ ಭಾಗವಹಿಸಿದ್ದರು. ತಾಲೂಕಿನ 30 ಜನ ಶಿಕ್ಷಕ/ಕಿಯರು ಭಾಗವಹಿಸಿದ್ದರು. ಶಿಬಿರದ ನಾಯಕರಾಗಿ ಶ್ರೀ ಎ.ಎಲ್. ಶೇಖಸೂರಣಗಿ. ಡಿಓಸಿ. ವಹಿಸಿದ್ದರು.



## ಅಭಿನಂದನೆಗಳು

ಮೈಸೂರಿನ ಯುವ ಕಾರ್ಯಕರ್ತ, ಭಾರತ್ ಸ್ಕೌಟ್ಸ್-ಗೈಡ್ಸ್, ಮೈಸೂರಿನ ಸ್ಥಾನಿಕ ಆಯುಕ್ತ ಹಾಗೂ ಪ್ರಗತಿ ಪ್ರತಿಷ್ಠಾನದ ಅಧ್ಯಕ್ಷರಾದ **ಶ್ರೀ ಬಿ.ಕೆ. ಅಜಯ್ ಕುಮಾರ್ ಜೈನ್** ರವರಿಗೆ ಕರ್ನಾಟಕ ಮುಕ್ತ ವಿಶ್ವವಿದ್ಯಾಲಯ ಆವರಣದಲ್ಲಿ ಆಯೋಜಿಸಲಾಗಿದ್ದ ದೀಕ್ಷಾಂತ ಸಮಾರಂಭದಲ್ಲಿ ಡಾಕ್ಟರೇಟ್ ಪದವಿಯನ್ನು ನೀಡಲಾಗಿದೆ. **"ಇಂಡಿಯನ್ ವರ್ಚುಯಲ್ ಯೂನಿವರ್ಸಿಟಿ ಫಾರ್ ಪೀಸ್ ಅಂಡ್ ಎಜುಕೇಶನ್"**ರವರಿಂದ ಆಯೋಜಿಸಲಾದ ಈ ಸಮಾರಂಭದಲ್ಲಿ ಇವರಿಗೆ ವಿಶ್ವವಿದ್ಯಾಲಯ ಡೀನ್ ಡಾ॥ ಜಾನ್ ಲೆಸ್ಲಿಕುಮಾರ್‌ರವರ ಅಧ್ಯಕ್ಷತೆಯಲ್ಲಿ ಪದವಿಯನ್ನು ನೀಡಲಾಯಿತು.

## ಕೊಪ್ಪಳ



ಜನವರಿ 16 ರಿಂದ 18 ರ ವರೆಗೆ ಕೊಪ್ಪಳ ಜಿಲ್ಲಾ ಸಂಸ್ಥೆ, ಸ್ಥಳೀಯ ಸಂಸ್ಥೆ ಯಲಬುರ್ಗಾ ಹಾಗೂ ಜವಾಹರ ವಿದ್ಯಾಲಯ, ಕುಕನೂರ ಇವರ ಸಂಯುಕ್ತಾಶ್ರಯದಲ್ಲಿ ಜಿಲ್ಲಾ ಮಟ್ಟದ ತೃತೀಯ ಸೋಪಾನ ಪರೀಕ್ಷಾ ಶಿಬಿರ ಹಮ್ಮಿಕೊಳ್ಳಲಾಗಿತ್ತು. ಶಿಬಿರದಲ್ಲಿ ಜಿಲ್ಲೆಯ ಯಲಬುರ್ಗಾ, ಗಂಗಾವತಿ, ಕೊಪ್ಪಳ ಹಾಗೂ ಕುಷ್ಟಗಿ ತಾಲ್ಲೂಕುಗಳಿಂದ ಒಟ್ಟು 313 ಸ್ಕೌಟ್ಸ್-ಗೈಡ್ಸ್‌ಗಳು ಭಾಗವಹಿಸಿದ್ದರು.

ಶಿಬಿರದ ಉದ್ಘಾಟನೆಯ್ನು ಸದರಿ ಸಂಸ್ಥೆಯ ಉಪಪ್ರಾಚಾರ್ಯರಾದ ಶ್ರೀಮತಿ ವಿ. ಆಂಟೋನಿ ಅವರು ನೆರವೇರಿಸಿದರು. ಸಮಾರಂಭದಲ್ಲಿ ಶ್ರೀ ಹೆಚ್.ಎಂ. ಸಿದ್ಧರಾಮಸ್ವಾಮಿ, ಜಿಲ್ಲಾ ಮುಖ್ಯ ಆಯುಕ್ತರು, ಶ್ರೀ ಮಲ್ಲಿಕಾರ್ಜುನ ಚೌಕಿಮಠ, ಜಿಲ್ಲಾ ಆಯುಕ್ತರು (ಸ್ಕೌಟ್ಸ್), ಶ್ರೀಮತಿ ಅರುಣ ವಸ್ತ್ರದ, ಜಿಲ್ಲಾ ಆಯುಕ್ತರು (ಗೈಡ್ಸ್) ಹಾಗೂ ಶ್ರೀ ವ್ಹಾ. ಸುದರ್ಶನ, ಜಿಲ್ಲಾ ಕಾರ್ಯದರ್ಶಿ, ಜಿಲ್ಲಾ ಸಹಕಾರ್ಯದರ್ಶಿ ಶ್ರೀ ಪ್ರಭಾಕರ ದಾಸರ, ಜಿಲ್ಲಾ ಸಂಘಟನಾ ಆಯುಕ್ತರಾದ ಶ್ರೀ ಶರಣಪ್ಪ ಹಡಪದ ಮತ್ತು ರಾಜ್ಯ ಪರಿಷತ್‌ನ ಸದಸ್ಯರಾದ ಶ್ರೀ ವಿಜಯಕುಮಾರ್ ಜಾಲಿಹಾಳ ಹಾಗೂ 4 ತಾಲ್ಲೂಕಿನ ಕಾರ್ಯದರ್ಶಿಗಳು ಉಪಸ್ಥಿತರದ್ದರು.

## ಕೋಲಾರ

"ಇಡೀ ವಿಶ್ವವೇ ಭಾರತ ದೇಶದ ಕಾರ್ಯವೈಖರಿ ಹಾಗೂ ಯುವಜನತೆಯ ಕಾರ್ಯಕ್ರಮಗಳನ್ನು ನೋಡುತ್ತಿದ್ದು ನಾವು ಮತ್ತಷ್ಟು ಪ್ರಗತಿಯನ್ನು ಕಾಣಬೇಕಾದರೆ ಸ್ವಾಮಿ ವಿವೇಕಾನಂದರ ಆದರ್ಶಗಳು ಮತ್ತು ಚಿಂತನೆಗಳನ್ನು ಕಾರ್ಯರೂಪಕ್ಕೆ ತಂದು ಯುವಕರು ಸೇವಾ ಮನೋಭಾವದಿಂದ ಸಾಮಾಜಿಕ ಹಾಗೂ ಶೈಕ್ಷಣಿಕವಾಗಿ ಪ್ರಗತಿಹೊಂದಿ ಜನರ ಅಭಿವೃದ್ಧಿಗೆ ಶ್ರಮಿಸಬೇಕಾದ ಕರ್ತವ್ಯ ಯುವಜನತೆಯ ಮೇಲಿದೆ" ಎಂದು ಭಾರತ್ ಸ್ಕೌಟ್ಸ್-ಗೈಡ್ಸ್ ಜಿಲ್ಲಾ ಸಂಸ್ಥೆಯ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಕೆ.ವಿ. ಶಂಕರಪ್ಪರವರು ತಿಳಿಸಿದರು.

ಬಂಗಾರಪೇಟೆ ತಾಲ್ಲೂಕಿನ ಹಂಚಾಳ ಗೇಟ್‌ನಲ್ಲಿರುವ ಫೀಲ್ಡ್ ಮಾರ್ಷಲ್ ಕೆ.ಎಂ. ಕಾರಿಯಪ್ಪ ಶಾಲಾ ಆವರಣದಲ್ಲಿ ಜಿಲ್ಲಾ ಸ್ಕೌಟ್ಸ್-ಗೈಡ್ಸ್ ಸಂಸ್ಥೆ, ಕಾರಿಯಪ್ಪ ಶಾಲೆ ಘಟಕ, ಕನ್ನಡ ಸೇನೆ, ಜಿಲ್ಲಾ ಘಟಕ ಯುವಶಕ್ತಿ ಮತ್ತು ರೋಟರಿ ಸಂಸ್ಥೆಗಳ ಸಂಯುಕ್ತ ಆಶ್ರಯದಲ್ಲಿ ನಡೆದ ರಾಷ್ಟ್ರೀಯ ಯುವ ದಿನಾಚರಣೆಯ ಅಂಗವಾಗಿ ಗ್ರಾಮೀಣ ಕ್ರೀಡಾಕೂಟದ ಆಯೋಜನೆ ಮತ್ತು ಪ್ರಶಸ್ತಿ ಪ್ರಧಾನ ಸಮಾರಂಭದಲ್ಲಿ ಭಾಗವಹಿಸಿ ಮಾತನಾಡುತ್ತಿದ್ದರು.

ಶಾಲೆಯ ಅಧ್ಯಕ್ಷರಾದ ಡಾ॥ ಚಂದ್ರಶೇಖರ್ ರವರು ಮಾತನಾಡಿ ನಮ್ಮ ಶಾಲೆಯನ್ನು ಇಡೀ ಜಿಲ್ಲೆಯಲ್ಲಿ ಉತ್ತಮ ಸ್ಕೌಟ್ಸ್-ಗೈಡ್ಸ್ ಶಾಲೆಯನ್ನಾಗಿ ಮಾಡಲು ನಮ್ಮೊಂದಿಗೆ ಶಾಲಾ ಸಮಿತಿಯ ಅಧ್ಯಕ್ಷರು ಹಾಗೂ ಸದಸ್ಯರು ಉತ್ತಮ ಸಹಕಾರ ಮತ್ತು ಮಾರ್ಗದರ್ಶನ ನೀಡುತ್ತಿದ್ದು, ಇದಕ್ಕೆ ಪೂರಕವಾಗಿ ಸಂಘ ಸಂಸ್ಥೆಗಳು ನಮ್ಮ ಶಾಲೆಗೆ ಮತ್ತಷ್ಟು ನೆರವು ನೀಡಿದರೆ ತುಂಬಾ ಸಹಕಾರಿಯಾಗಲಿದೆ ಎಂದು ತಿಳಿಸಿದರು.

ರೋಟರಿ ಸಂಸ್ಥೆಯ ಅಧ್ಯಕ್ಷರಾದ ಶ್ರೀ ದೇವರಾಜ್ ರವರು ಮಾತನಾಡಿ ಸ್ಕೌಟ್ಸ್-ಗೈಡ್ಸ್ ಸಂಸ್ಥೆ ಸಾಮಾಜಿಕ ಸೇವಾಕಾರ್ಯಗಳನ್ನು ದಾನಿಗಳ ಸಹಾಯದಿಂದ ಮಾಡುತ್ತಿದ್ದು ಇಂತಹ ಸಂಸ್ಥೆಗೆ ಸರ್ಕಾರದಿಂದ ಹಾಗೂ ದಾನಿಗಳಿಂದ ಮತ್ತಷ್ಟು ನೆರವು ನೀಡಿದರೆ ಉತ್ತಮ ಎಂದು ತಿಳಿಸಿದರು.

ಜಿಲ್ಲಾ ಹಸಿರು ಸೇನೆಯ ಅಧ್ಯಕ್ಷರಾದ ಕನ್ನಡ ಮಿತ್ರ ಶ್ರೀ ವೆಂಕಟಪ್ಪ ರವರು ಮಾತನಾಡಿ "ಸ್ಕೌಟ್ಸ್-ಗೈಡ್ಸ್ ಸಂಸ್ಥೆಯು ಯುವಜನತೆಯಲ್ಲಿ ಉತ್ತಮ ಮೌಲ್ಯಗಳನ್ನು ಬೆಳೆಸುವುದರೊಂದಿಗೆ ಸದಾಕಾಲ ಕ್ರಿಯಾಶೀಲರಾಗಿ ತಮ್ಮನ್ನು ತಾವು ಯಾವುದಾದರು ಒಂದು ಚಟುವಟಿಕೆಯಲ್ಲಿ ತೊಡಗಿಸಿಕೊಳ್ಳುವಂತೆ ಪ್ರೇರೇಪಿಸುವಂತಹ ಚಟುವಟಿಕೆಗಳು ಇದರಲ್ಲಿ ಅಡಗಿದ್ದು, ಇದರ ಲಾಭವನ್ನು ಎಲ್ಲರೂ ಪಡೆದು ನಮ್ಮ ದೇಶದ ಪ್ರಗತಿಗೆ ಸಹಕರಿಸೋಣ" ಎಂದು ತಿಳಿಹೇಳಿದರು.

ಜಿಲ್ಲಾ ಕಾರ್ಯದರ್ಶಿ ಶ್ರೀ ಜನಾರ್ಧನ್ ರವರು ಮಾತನಾಡಿ ಸಂಸ್ಥೆಯು ನಡೆಸಿದ ಆಟಗಳು ಯುವಜನತೆಗೆ ಮುದನೀಡಿದ್ದು ಮತ್ತಷ್ಟು ತಾವು ಕ್ರಿಯಾಶೀಲರಾಗಿ ಬೆಳೆಯಲು ನಮ್ಮ ಸಂಸ್ಥೆಯ ಶಿಬಿರಗಳಲ್ಲಿ ಭಾಗವಹಿಸಿ ಎಂದು ತಿಳಿಸಿದರು.

ಈ ಸಮಾರಂಭದಲ್ಲಿ ಜಿಲ್ಲಾ ಯುವ ಶಕ್ತಿ ಅಧ್ಯಕ್ಷರಾದ ಶ್ರೀ ಪುಟ್ಟರಾಜು, ರೋಟರಿ ಕಾರ್ಯದರ್ಶಿ ಶ್ರೀ ಚಂದ್ರಶೇಖರ್, ಶಾಲಾ ಸಮಿತಿಯ ಅಧ್ಯಕ್ಷರಾದ ಶ್ರೀ ಸಿ. ವೆಂಕಟೇಶಪ್ಪ, ಶಾಲಾ ಮುಖ್ಯಶಿಕ್ಷಕರಾದ ಶ್ರೀ ಲಕ್ಷ್ಮೀನಾರಾಯರೆಡ್ಡಿ ಹಾಗೂ ಇತರರು ಭಾಗವಹಿಸಿದ್ದರು.

* ಶಿಕ್ಷಣ ಇಲಾಖೆಯಲ್ಲಿನ ಅಧಿಕಾರಿಗಳ ಸಹಕಾರ ಮತ್ತು ಶಿಕ್ಷಕರು ತಮ್ಮ ಶಾಲೆಗಳಲ್ಲಿ ಮಕ್ಕಳಿಗೆ ಸ್ಕೌಟ್ಸ್-ಗೈಡ್ಸ್ ಶಿಕ್ಷಣವನ್ನು ಕಡ್ಡಾಯವಾಗಿ ನೀಡಿದಾಗ ಮಾತ್ರ ಈ ಸಂಸ್ಥೆಯ ಉದ್ದೇಶಗಳು ಸಾಕಾರಗೊಳ್ಳಲು ಸಾಧ್ಯ ಎಂದು ಜಿಲ್ಲಾ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಕೆ.ವಿ. ಶಂಕರಪ್ಪ ರವರು ಕೋಲಾರ ತಾಲ್ಲೂಕಿನ ಪಾರ್ಶ್ವಗಾನಹಳ್ಳಿಯ ಮೋರಾರ್ಜಿ ದೇಸಾಯಿ ವಸತಿ ಶಾಲೆಯಲ್ಲಿ ಕೋಲಾರ ಸ್ಥಳೀಯ ಸಂಸ್ಥೆಯ ಆಶ್ರಯದಲ್ಲಿ ನಡೆದ ದ್ವಿತೀಯ ಸೋಪಾನ ಪರೀಕ್ಷಾ ಶಿಬಿರದ ಪ್ರಶಸ್ತಿ ವಿತರಣಾ ಸಮಾರಂಭದಲ್ಲಿ ಸ್ಕೌಟ್ಸ್-ಗೈಡ್ಸ್‌ಗಳಿಗೆ ಪ್ರಶಸ್ತಿವಿತರಿಸಿ ಮಾತನಾಡಿದರು.



ಶಾಲೆಯ ಪ್ರಾಂಶುಪಾಲರಾದ ಶ್ರೀ ವೆಂಕಟರಮಣಪ್ಪ ರವರು ಮಾತನಾಡಿ "ಸಂಸ್ಥೆಯು ಉತ್ತಮವಾದ ಉದ್ದೇಶಗಳನ್ನು ಹೊಂದಿದ್ದು, ಸಮಾಜದ ಪ್ರತಿಯೊಬ್ಬರೂ ಸಹ ಈ ಸಂಸ್ಥೆಯ ಶಿಬಿರಗಳಲ್ಲಿ ಭಾಗವಹಿಸಿ ಇಲ್ಲಿನ ಮೌಲ್ಯಗಳನ್ನು ತಮ್ಮ ಜೀವನದಲ್ಲಿ ರೂಢಿಸಿಕೊಳ್ಳಬೇಕಾಗಿದೆ" ಎಂದು ತಿಳಿಸಿದರು. ಇದೇ ಸಂದರ್ಭದಲ್ಲಿ ಶಾಲೆಯ ಪ್ರಾಂಶುಪಾಲರಾದ ಶ್ರೀ ವೆಂಕಟರಮಣಪ್ಪರವರನ್ನು ಜಿಲ್ಲಾ ಸಂಸ್ಥೆಯ ಪರವಾಗಿ ಸನ್ಮಾನಿಸಲಾಯಿತು. ಈ ಸಮಾರಂಭದಲ್ಲಿ ಕೋಲಾರ ಸ್ಥಳೀಯ ಸಂಸ್ಥೆಯ ಪದಾಧಿಕಾರಿಗಳು ಹಾಗು ಇತರರು ಉಪಸ್ಥಿತರಿದ್ದರು.

* ದೇಶ ಪ್ರಗತಿ ಕಾಣಲು ನಮ್ಮ ಸುತ್ತಲಿನ ಪರಿಸರವನ್ನು ಸ್ವಚ್ಛವಾಗಿಟ್ಟುಕೊಳ್ಳಬೇಕಾದ ಅನಿವಾರ್ಯ ಹೆಚ್ಚಾಗಿದ್ದು, ಶಾಲಾ-ಕಾಲೇಜುಗಳು ತಮ್ಮ ತಂಡಗಳಲ್ಲಿ ಸಾರ್ವಜನಿಕ ಆಸ್ತಿಯನ್ನು ಸಂರಕ್ಷಿಸುವುದರ ಜೊತೆಗೆ ಸಾರ್ವಜನಿಕರಿಗೆ ಜಾಗೃತಿಯನ್ನು ಮೂಡಿಸುವ ಕೆಲಸ ನಿರಂತರವಾಗಿ ಸಾಗಬೇಕಾಗಿದೆ ಎಂದು ರೈಲ್ವೆ ಟ್ರಾಫಿಕ್ ಇನ್ಸ್‌ಪೆಕ್ಟರ್ ಶ್ರೀ ಮುಖೇಶ ಕುಮಾರ್‌ಗಾರ್ಗ ರವರು ಸ್ಕೌಟ್ಸ್-ಗೈಡ್ಸ್ ಸಂಸ್ಥೆಯು ಕೋಲಾರ ನಗರದ ರೈಲ್ವೆ ನಿಲ್ದಾಣದ ಸ್ವಚ್ಛತಾ ಕಾರ್ಯದಲ್ಲಿ ಭಾಗವಹಿಸಿ ಮಾತನಾಡಿದರು.

ಕೋಲಾರ ಸ್ಥಳೀಯ ಸಂಸ್ಥೆ ಅಧ್ಯಕ್ಷರಾದ ಶ್ರೀ ಅಪ್ಪಿನಾರಾಯಣಸ್ವಾಮಿ ರವರು ಮಾತನಾಡಿ ಸ್ಕೌಟ್ಸ್-ಗೈಡ್ಸ್ ಸಂಸ್ಥೆಯು ಉತ್ತಮವಾದ ಚಟುವಟಿಕೆಗಳನ್ನು ಕೈಗೊಂಡಿದ್ದು, ಇದರಲ್ಲಿ ಎಲ್ಲಾ ಮಕ್ಕಳು ಭಾಗವಹಿಸಿ ಇದರ ಲಾಭ ಪಡೆಯುವುದರೊಂದಿಗೆ ಸಮಾಜಕ್ಕೆ ತನ್ನದೇ ಆದಂತಹ ಸೇವೆಯನ್ನು ಸಲ್ಲಿಸಬೇಕು ಎಂದು ತಿಳಿಸಿದರು. ಈ ಸಂದರ್ಭದಲ್ಲಿ ಸಮಾಜಸೇವಕರಾದ ಶ್ರೀ ಕಿಶೋರ್ ಕುಮಾರ್, ಶ್ರೀ ಮಂಜುನಾಥ್, ಶ್ರೀ ಇಸ್ಮಾಯಿಲ್ ಖಾನ್, ಶ್ರೀ ಬತ್ತೆಪ್ಪ, ಪದಾಧಿಕಾರಿಗಳು, ಸ್ಕೌಟ್‌ಗಳು ಸರ್ಕಾರಿ ಮಹಿಳಾ ಕಾಲೇಜಿನ ರೇಂಜರ್-ರೋವರ್‌ಗಳು ಭಾಗವಹಿಸಿದ್ದರು.



## ಅಭಿನಂದನೆಗಳು

ಜನವರಿ 4 ರಿಂದ 5, 2018 ರ ವರೆಗೆ ಗದಗ್‌ನಲ್ಲಿ ನಡೆದ ಸರಕಾರಿ ನೌಕರರ ಕ್ರೀಡಾಕೂಟದ ಓಟದಲ್ಲಿ **ಶ್ರೀಮತಿ ಅನ್ನಪೂರ್ಣ ಯೊಳವಾರ,** ಗೈಡ್ ಕ್ಯಾಪ್ಟನ್, ಬಿ.ಆರ್.ಸಿ., ಗ್ರಾಮೀಣ ಕಛೇರಿ, ಗದಗ ಇವರು ಪ್ರಥಮಸ್ಥಾನವನ್ನು ಪಡೆದಿರುತ್ತಾರೆ.

## ಮೈಸೂರು

ಡಿಸೆಂಬರ್ 20 ರಂದು ಮೈಸೂರು ಜಿಲ್ಲಾ ಸಂಸ್ಥೆಯಲ್ಲಿ ಮೈಸೂರು, ಕೊಡಗು, ಮಂಡ್ಯ ಮತ್ತು ಚಾಮರಾಜ ನಗರ ಜಿಲ್ಲೆಗಳ ರೋವರ್ಸ್-ರೇಂಜರ್ಸ್, ಸ್ಕೌಟರ್ಸ್-ಗೈಡರ್ಸ್‌ಗಳಿಗೆ **Surf Smart** ಕಾರ್ಯಕ್ರಮವನ್ನು ಆಯೋಜಿಸಲಾಗಿತ್ತು. ಈ ಕಾರ್ಯಕ್ರಮದಲ್ಲಿ 128 ರೋವರ್ಸ್-ರೇಂಜರ್ಸ್, ಸ್ಕೌಟರ್ಸ್-ಗೈಡರ್ಸ್ ಭಾಗವಹಿಸಿದ್ದರು. ಶ್ರೀ ಅಶೋಕ್ ಕುಮಾರ್ ಜಿಲ್ಲಾ ಸಂಘಟಕರು, ಚಾಮರಾಜನಗರ ಜಿಲ್ಲೆ ಇವರು ನಾಯಕರಾಗಿದ್ದರು.



ಶ್ರೀ ಪಿ. ವಿಶ್ವನಾಥ್, ಜಿಲ್ಲಾ ಮುಖ್ಯ ಆಯುಕ್ತರು, ಭಾರತ್ ಸ್ಕೌಟ್ಸ್-ಗೈಡ್ಸ್, ಜಿಲ್ಲಾ ಸಂಸ್ಥೆ, ಮೈಸೂರು ಇವರು ಈ ಕಾರ್ಯಕ್ರಮವನ್ನು ಉದ್ಘಾಟಿಸಿದರು. ಮೊಬೈಲ್, ಇಂಟರ್‌ನೆಟ್‌ಗಳಿಂದ ಹೆಚ್ಚಿನ ಅನುಕೂಲಗಳು ಆಗುತ್ತಿದೆ, ಅದೇ ರೀತಿ ಅನಾನುಕೂಲಗಳೂ ಆಗುತ್ತಿವೆ. ನಾವುಗಳು ಈ ಬಗ್ಗೆ ಜಾಗೃತಿ ವಹಿಸಬೇಕು ಎಂದು ತಿಳಿಸಿದರು.

ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಡಾ. ಕೆ.ಬಿ. ಗುರುಮೂರ್ತಿ, ಖಜಾಂಚಿಗಳು, ಇಂದಿನ ದಿನಗಳಲ್ಲಿ ಮೊಬೈಲ್ ಇಂಟರ್‌ನೆಟ್‌ಗಳ ಬಳಕೆ ಹೆಚ್ಚಾಗುತ್ತಿದ್ದು ಇದರಿಂದ ಆಗುವ ಅನುಕೂಲ ಮತ್ತು ಅನಾನುಕೂಲಗಳ ಬಗ್ಗೆ ಯುವಜನತೆ ಹೆಚ್ಚಿನ ಅರಿವನ್ನು ಪಡೆದುಕೊಳ್ಳಬೇಕು ಎಂದರು. ಶ್ರೀ ಅಬ್ದುಲ್ ಜಮೀಲ್, ಜಿಲ್ಲಾ ಕಾರ್ಯದರ್ಶಿಗಳು ಸ್ವಾಗತಿಸಿದರು. ಶ್ರೀಮತಿ ಎಸ್. ಸುಜಯಾ ಜಿಲ್ಲಾ ಜಂಟಿ ಕಾರ್ಯದರ್ಶಿಗಳು ವಂದನಾರ್ಪಣೆ ಮಾಡಿದರು.

ಈ ಸಮಾರಂಭದಲ್ಲಿ ಡಾ. ಜಿ. ಸಿದ್ದೇಶ್ ಉಪಾಧ್ಯಕ್ಷರು, ಭಾರತ್ ಸ್ಕೌಟ್ಸ್-ಗೈಡ್ಸ್, ಜಿಲ್ಲಾ ಸಂಸ್ಥೆ, ಮೈಸೂರು ಹಾಗೂ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳು ಉಪಸ್ಥಿತರಿದ್ದರು.

## ರಾಯಚೂರು

ಡಿಸೆಂಬರ್ 21, 2017 ರಂದು ರಾಯಚೂರು ಜಿಲ್ಲಾ ಮಟ್ಟದ ಸ್ಕೌಟರ್ಸ್-ಗೈಡರ್ಸ್ ಸಮಾವೇಶವನ್ನು ಜಿಲ್ಲಾ ಸ್ಕೌಟ್ ಭವನದಲ್ಲಿ ಹಮ್ಮಿಕೊಳ್ಳಲಾಯಿತು. ಈ ಸಮಾವೇಶವನ್ನು ಶ್ರೀ ಬಿ.ಕೆ. ನಂದನೂರು ಉಪನಿರ್ದೇಶಕರು, ಸಾರ್ವಜನಿಕ ಶಿಕ್ಷಣ ಇಲಾಖೆ, ರಾಯಚೂರು ಇವರು ಉದ್ಘಾಟಿಸಿ ಮಾತನಾಡಿ, "ಸ್ಕೌಟ್ಸ್-ಗೈಡ್ಸ್ ಸಂಸ್ಥೆಯು ಮಾನವೀಯ ಮೌಲ್ಯಗಳನ್ನು ಬೆಳೆಸುವಲ್ಲಿ ಪ್ರಧಾನ ಪಾತ್ರವಹಿಸುವ ಮೂಲಕ ಯುವ ಸಮೂಹದಲ್ಲಿ ಶಿಸ್ತು, ಸಂಯಮ, ತಾಳ್ಮೆ, ಸಮಯಪಾಲನೆ, ಕರ್ತವ್ಯನಿಷ್ಠೆ, ಪ್ರಾಮಾಣಿಕತೆ, ಮಾನವೀಯ ಮೌಲ್ಯಗಳನ್ನು ಕಲ್ಪಿಸುವ ಮೂಲಕ ಯುವಶಕ್ತಿಗೆ ಪ್ರೇರಣೆಯಾಗಿದೆ" ಎಂದು ಅಭಿಪ್ರಾಯ ಪಟ್ಟರು.

ಮುಖ್ಯ ಅತಿಥಿಗಳಾಗಿ ಆಗಮಿಸಿದ್ದ ಶ್ರೀ ರಾಮಚಂದ್ರ ಶಿವಂಗಿ, ಕ್ಷೇತ್ರ ಶಿಕ್ಷಣಾಧಿಕಾರಿಗಳು, ರಾಯಚೂರು ಇವರು ಮಾತನಾಡಿ, ಜಿಲ್ಲೆಯಲ್ಲಿ ಸ್ಕೌಟ್ಸ್-ಗೈಡ್ಸ್ ಚಟುವಟಿಕೆಗಳು ಇನ್ನೂ ಹೆಚ್ಚಿನ ರೀತಿಯಲ್ಲಿ ನಡೆಯಲು ಶಿಕ್ಷಕರು ಆಸಕ್ತಿಯಿಂದ ಭಾಗವಹಿಸಿ ಪ್ರತಿ ಶಾಲೆಯಲ್ಲಿ ಘಟಕಗಳನ್ನು ಪ್ರಾರಂಭಿಸಲು ಸಲಹೆ ನೀಡಿದರು. ಪ್ರಾಸ್ತಾವಿಕವಾಗಿ ಶ್ರೀ ರಾವುತರಾವ್ ಬರೂರ, ಮಾಜಿ ಜಿಲ್ಲಾ ಸಂಘಟನಾ ಆಯುಕ್ತರು ಮಾತನಾಡಿದರು. ಈ ಕಾರ್ಯಕ್ರಮದ ಸಂದರ್ಭದಲ್ಲಿ ಉನ್ನತ ತರಬೇತಿ ಪಡೆದ ಶ್ರೀಮತಿ ವಿಜಯಲಕ್ಷ್ಮಿ, ಶ್ರೀ ಕಮಲಾಕರ ಐನಾಪುರೆ ಹಾಗೂ ಶ್ರೀ ಮಂಜುನಾಥ ಟಿ.ಎಸ್. ಇವರಿಗೆ ಪ್ರಮಾಣ ಪತ್ರಗಳನ್ನು ನೀಡಿ ಗೌರವಿಸಲಾಯಿತು. ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿ ಮಾತನಾಡಿದ ಶ್ರೀ ಕೆ. ತಿಮ್ಮಯ್ಯ, ಜಿಲ್ಲಾ ಮುಖ್ಯ ಆಯುಕ್ತರು ಸ್ಕೌಟ್ಸ್-ಗೈಡ್ಸ್‌ಗಳ ಭಾವಿ ಜೀವನಕ್ಕೆ ಸಹಕಾರಿಯಾಗಲು ನಾವುಗಳು ಶ್ರಮಿಸಬೇಕೆಂದರು. ಈ ಸಂದರ್ಭದಲ್ಲಿ



ಶ್ರೀ ಚಂದ್ರಶೇಖರ ಭಂಡಾರಿ, ಕ್ಷೇತ್ರ ಶಿಕ್ಷಣಾಧಿಕಾರಿಗಳು, ಲಿಂಗಸೂಗೂರು, ಶ್ರೀ ಹೆಚ್. ಹನುಮಂತಪ್ಪ, ಜಿಲ್ಲಾ ಕಾರ್ಯದರ್ಶಿಗಳು, ಶ್ರೀ ಬಸವರಾಜ ಬೋರೆಡ್ಡಿ ಜಿಲ್ಲಾ ಆಯುಕ್ತರು(ಸ್ಕೌ) ಶ್ರೀಮತಿ ಕೆ. ಆಲಿಯಾ ಖಾನಂ, ಜಿಲ್ಲಾ ಆಯುಕ್ತರು(ಗೈ), ಶ್ರೀ ಅಮರೇಗೌಡ ಪಾಟೀಲ್ ಖಜಾಂಚಿಗಳು ಭಾಗವಹಿಸಿದ್ದರು. ಶ್ರೀ ಎಲ್.ಬಿ. ಹೊರಪ್ಯಾಟಿ, ಜಿಲ್ಲಾ ಸ್ಥಾನಿಕ ಆಯುಕ್ತರು ಇವರು ಸ್ವಾಗತಿಸಿದರು. ಶ್ರೀ ಆರ್.ಹೆಚ್. ಸಾಗರ ವಂದಿಸಿದರು. ಶ್ರೀಮತಿ ವಿಜಯಲಕ್ಷ್ಮಿ ಕಾರ್ಯಕ್ರಮವನ್ನು ನಿರ್ವಹಿಸಿದರು.

## ತುಮಕೂರು

ಡಿಸೆಂಬರ್ 23 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸ್ಥಳೀಯ ಸಂಸ್ಥೆ ತುಮಕೂರು ವತಿಯಿಂದ ದೇವರಾಯನದುರ್ಗ ದಲ್ಲಿ ಏರ್ಪಡಿಸಲಾಗಿದ್ದ ಹೊರಸಂಚಾರ ಕಾರ್ಯಕ್ರಮದಲ್ಲಿ ಶ್ರೀ ಸಿದ್ಧಗಂಗಾ ಎಲಿಮೆಂಟರಿ ಶಾಲೆ ಮತ್ತು ಶ್ರೀ ಸಿದ್ದಲಿಂಗೇಶ್ವರ ಸ.ಉ. ಪ್ರೌಢಶಾಲೆಗಳೊಂದಿಗೆ ಸ್ಥಳೀಯ ಇತರೇ ಶಾಲೆಯ 190 ಸ್ಕೌಟ್-ಗೈಡ್‌ಗಳು ಭಾಗವಹಿಸಿದ್ದರು.



ದೇವಾಲಯದ ಮುಂದಿನ ಉದ್ಯಾನವನದಲ್ಲಿ ಮೊದಲು ಧ್ವಜಾರೋಹಣ ಮಾಡಿದ ನಂತರ ದೇವರ ದರ್ಶನ ಮಾಡಿ ಮುಜರಾಯಿ ಇಲಾಖೆಯ ಅಧಿಕಾರಿಗಳಾದ ಶ್ರೀಮತಿ ಸಿದ್ಧಗಂಗಮ್ಮ, ಕರ್ನಾಟಕ ಸರ್ಕಾರದ ಕಾರ್ಯನಿರ್ವಾಹಕ ಅಧಿಕಾರಿಗಳು, ಸೂಚಿಸಿದ ಉದ್ಯಾನವನದಲ್ಲಿ ಸ್ವಚ್ಛತಾ ಕಾರ್ಯ ಮಾಡಲಾಯಿತು. ಸ್ಕೌಟ್ ಮಾಸ್ಟರ್‌ಗಳಾದ ಶ್ರೀ ರಮೇಶ್ ಟಿ.ಎಸ್. ಮತ್ತು ದಯಾನಂದ ಸ್ವಾಮಿ ರವರು "ವನವಿದ್ಯಾಸಂಕೇತಗಳು" ಮತ್ತು "ನಕ್ಷೆಗಳ" ಬಗ್ಗೆ ಮಾಹಿತಿ ನೀಡಿದರು. ನಂತರ ದೇವಸ್ಥಾನದ ದಾಸೋಹದಲ್ಲಿ ಊಟ ಮುಗಿಸಿ ನಾಮ ಚಿಲುಮೆ ಎಂಬಲ್ಲಿ ಹೊರಸಂಚಾರಕ್ಕೆ ಹೋಗಲಾಯಿತು. ದಾರಿಯ ಮಧ್ಯದಲ್ಲಿ ಸೂಚನೆಗಳಿಗೆ ಅನುಸಾರವಾಗಿ ಸ್ಕೌಟ್‌ಗಳು ಪರಿಸರ ಸಂರಕ್ಷಣೆಯ ಘೋಷಣೆಗಳು ಮತ್ತು ವಿವಿಧ ಹಾಡುಗಳನ್ನು ಹಾಡುತ್ತಾ ಸುಮಾರು 3.15ಕ್ಕೆ ತಲುಪಿ, ನಾಮಚಿಲುಮೆಯ ವನ್ಯ ಜೀವಿಯ ಸೊಬಗನ್ನು ನೋಡಿ ಅಲ್ಲಿನ ಔಷಧಿ ಸಸ್ಯಗಳನ್ನು ನೋಡಿ ಅದರ ಬಗ್ಗೆ ಅನೇಕ ಮಾಹಿತಿ ಪಡೆಯಲಾಯಿತು. ಅಲ್ಲಿದ್ದ ಆಟದ ಮೈದಾನದಲ್ಲಿ ಆಟಗಳನ್ನು ಆಡಲಾಯಿತು.

* ಜನವರಿ 6 ರಂದು ತುಮಕೂರು ಜಿಲ್ಲಾ ಸಂಸ್ಥೆ ವತಿಯಿಂದ ರಾಷ್ಟ್ರಪತಿ ಪುರಸ್ಕಾರ್ ಮತ್ತು ರಾಜ್ಯ ಪುರಸ್ಕಾರ್ ಪ್ರಶಸ್ತಿ ಪುರಸ್ಕೃತ ವಿದ್ಯಾರ್ಥಿಗಳ ಒಂದು ದಿನದ ರ‍್ಯಾಲಿಯನ್ನು ತುಮಕೂರು ಬಿ.ಹೆಚ್. ರಸ್ತೆಯಲ್ಲಿರುವ ಶ್ರೀ ಸಿದ್ಧಗಂಗಾ ಎಲಿಮೆಂಟರಿ ಶಾಲಾ ಆವರಣದಲ್ಲಿ ಹಮ್ಮಿಕೊಳ್ಳಲಾಗಿತ್ತು. ಈ ಕಾರ್ಯಾಗಾರಕ್ಕೆ ಜಿಲ್ಲಾ ಸಂಸ್ಥೆಯ ಎಲ್ಲಾ ಪದಾದಿಕಾರಿಗಳು ಆಗಮಿಸಿ ಉದ್ಘಾಟನೆ ಮಾಡಿ ಕಾರ್ಯಾಗಾರಕ್ಕೆ ಚಾಲನೆ ನೀಡಿದರು. ಈ ಸಂದರ್ಭದಲ್ಲಿ ಸ್ಕೌಟ್ ಆಯುಕ್ತ ಶ್ರೀ ವೇಣುಗೋಪಾಲಕೃಷ್ಣರವರು ಅಧ್ಯಕ್ಷತೆ ವಹಿಸಿದ್ದರು. ಶ್ರೀ ಈಶ್ವರಯ್ಯರವರು ಹೆಡ್ ಕ್ವಾರ್ಟರ್ ಕಮೀಷನರ್, ಶ್ರೀ ಕೆಂಪರಂಗಯ್ಯ ಎ.ಡಿ.ಸಿ., ಉಪಸ್ಥಿತರಿದ್ದರು.

ರಾಷ್ಟ್ರಪತಿ ಪುರಸ್ಕೃತರು 4 (ಗೈಡ್ಸ್), ರಾಜ್ಯ ಪುರಸ್ಕಾರ ಪುರಸ್ಕೃತರು 22 (ಸ್ಕೌಟ್ಸ್) ಮತ್ತು ವಿವಿಧ ತಾಲ್ಲೂಕುಗಳಿಂದ 4 ಗೈಡ್ ಶಿಕ್ಷಕಿಯರು 4 ಸ್ಕೌಟ್ ಶಿಕ್ಷಕಿಯರು ಹಾಜರಿದ್ದರು. ಆ್ಯಂಬುಲೆನ್ಸ್‌ನ ಪ್ರಾತ್ಯಕ್ಷಿಕೆ, ಬೆಂಕಿಯ ವಿಧಗಳು, ಮುಂತಾದ ಚಟುವಟಿಕೆಗಳನ್ನು ಮಾಡಿಸಲಾಯಿತು.

* ಜನವರಿ 12 ರಂದು ಸ್ವಾಮಿ ವಿವೇಕಾನಂದರ ಜಯಂತಿಯನ್ನು ಆಚರಿಸಲಾಯಿತು. ಈ ಕಾರ್ಯಕ್ರಮದ ಅಂಗವಾಗಿ ನಡೆದ ಮೆರವಣಿಯಲ್ಲಿ 150 ಸ್ಕೌಟ್‌ಗಳು 90 ಗೈಡ್‌ಗಳು ಭಾಗವಹಿಸಿದ್ದರು. ಈ ಕಾರ್ಯಕ್ರಮದ ಅಧ್ಯಕ್ಷತೆಯನ್ನು ತುಮಕೂರು ಆರ್ಯನ್ ಪ್ರೌಢಶಾಲಾ ಮುಖ್ಯೋಪಾಧ್ಯಾಯರು ವಹಿಸಿ ಮಾತನಾಡುತ್ತಾ ಇಂದಿನ

ಯುವಕರು ದೇಶಪ್ರೇಮ, ದೇಶಭಕ್ತಿ, ಆಧ್ಯಾತ್ಮಿಕ ಮೌಲ್ಯ, ಶ್ರದ್ಧೆ ಭಕ್ತಿ, ಮಾತೃಪ್ರೇಮ ಇಂತಹ ಆದರ್ಶತತ್ವಗಳನ್ನು ಅಳವಡಿಸಿಕೊಳ್ಳಬೇಕೆಂದು ತಿಳಿಸಿದರು. ಈ ಸಂದರ್ಭದಲ್ಲಿ ಜಿಲ್ಲಾ ತರಬೇತಿ ಆಯುಕ್ತರಾದ ಶ್ರೀ ಬಿ.ಟಿ. ಸಿಂಧಗೀಕರ್, ಜಿಲ್ಲಾ ಸಂಘಟಕರಾದ ಶ್ರೀ ಕೆ.ಎಸ್. ಚಂದ್ರಶೇಖರ್ ಗೈಡ್ ಸಂಘಟಕರಾದ ಶ್ರೀಮತಿ ಗಂಗಾಂಬಿಕೆ ಸ್ಕೌಟ್-ಗೈಡ್‌ಗಳಿಗೆ ಸ್ವಾಮಿ ವಿವೇಕಾನಂದರ ಬಗ್ಗೆ ತಿಳಿಸಿದರು. ಶ್ರೀ ಬಿ.ಟಿ. ಸಿಂಧಗೀಕರ್‌ರವರು ರಾಷ್ಟ್ರೀಯ ಯೋಜನೆಯಲ್ಲಿ ಯುವಕರ ಪಾತ್ರವೇನು ಎಂಬುದರ ಬಗ್ಗೆ ತಿಳಿಸಿದರು. ಶ್ರೀ ನಾಯಕ್, ಶಿಕ್ಷಕರು ಎಲ್ಲರಿಗೂ ವಂದನೆ ಸಲ್ಲಿಸಿದರು.

## ಕಾರವಾರ



ಕುಮಟಾ ಅಳ್ವೆಕೋಡಿ ದಯಾನಿಲಯ ವಿಶೇಷ ಶಾಲೆಯ ಬುದ್ಧಿಮಾಂದ್ಯ ಮಕ್ಕಳಿಗೆ 2018 ಹೊಸ ವರ್ಷದ ಶುಭಾಶಯಗಳೊಂದಿಗೆ ಹಣ್ಣು, ಸಿಹಿ ಹಂಚುವ ಕಾರ್ಯ ಸಂಪನ್ನಗೊಂಡಿತು. ಈ ಕಾರ್ಯಕ್ರಮವನ್ನು ಶ್ರೀ ಎಸ್.ಎಸ್. ಭಟ್ಟ ಲೋಕೇಶ್ವರ, ರಾಷ್ಟ್ರಪ್ರಶಸ್ತಿ ವಿಜೇತರು. ಜಿಲ್ಲಾ ಸ್ಥಾನಿಕ ಆಯುಕ್ತರು ಭಾರತ ಸ್ಕೌಟ್ಸ್-ಗೈಡ್ಸ್ ಉತ್ತರ ಕನ್ನಡ ಜಿಲ್ಲಾ, ಶ್ರೀಮತಿ ಸಲಿಲಾ ಎಸ್. ಭಟ್ಟ ನಿವೃತ್ತ ಶಿಕ್ಷಕಿ (ಬುಲ್ ಬುಲ್) ಇವರು ಜೊತೆಯಾಗಿ ಯಶಸ್ವಿಗೊಳಿಸಿದರು. ಶ್ರೀ ಕೆ.ಪಿ. ಭಂಡಾರಿ ನಿವೃತ್ತ ಶಿಕ್ಷಕರು (ಸ್ಕೌಟ್ ಮಾಸ್ಟರ್) ಸಹಕರಿಸಿದರು.

ಶ್ರೀ ಎಸ್.ಎಸ್. ಭಟ್ಟ ಲೋಕೇಶ್ವರ ಮಾತನಾಡುತ್ತಾ ಈ ಕಂದಮ್ಮಗಳು ಸಮಾಜದ ಒಂದು ಭಾಗ. ಇವರಲ್ಲಿ ಆಯ್ದ ಕೆಲವು ಮಕ್ಕಳಿಗೆ ನಮ್ಮ ಸ್ಕೌಟ್ ಮರಿಸೇನೆಯ ತುಕಡಿಯಲ್ಲಿ ಒಂದಾಗಿಸುವ ಪ್ರಯತ್ನವಾಗಿ ಸ್ಕೌಟ್ ಓಪನ್ ಯುನಿಟ್ ಪ್ರಾರಂಭಿಸುವ ರೀತ್ಯಾ ಮಕ್ಕಳಿಗೆ ಸ್ಕೌಟ್ ಸಮವಸ್ತ್ರ ಶಿಕ್ಷಕಿಯರಿಗೆ ವಿಶೇಷ ತರಬೇತಿ ನೀಡಿ ಸದ್ಯವೇ ಸ್ಕೌಟ್ ಶಾಖೆ ಪ್ರಾರಂಭಿಸಲು ಪ್ರಯತ್ನಿಸಲಾಗುತ್ತಿದೆ ಎಂದರು.

ಈ ಕಾರ್ಯಕ್ರಮದಲ್ಲಿ ಶಾಲೆಯ ದೈಹಿಕ ಶಿಕ್ಷಕರಾದ ಶ್ರೀ ಕೊರಗಾಂವಕರ, ಮುಖ್ಯ ಶಿಕ್ಷಕರಾದ ಶ್ರೀ ಸಿರಿಲ್ ಹಾಗೂ ಶಿಕ್ಷಕಿಯರು ಉಪಸ್ಥಿತರಿದ್ದು ಸಹಕರಿಸಿದರು. ಶ್ರೀ ಪಿ.ಕೆ. ಪ್ರಕಾಶ್, ಡಿ.ಡಿ.ಪಿ.ಐ. ಜಿಲ್ಲಾ ಮುಖ್ಯ ಆಯುಕ್ತರು, ಶ್ಕೌಟ್-ಗೈಡ್ ಜಿಲ್ಲಾ ಕಾರ್ಯದರ್ಶಿ. ಶ್ರೀ ಬಿ.ಡಿ. ಫರ್ನಾಂಡೀಸ್, ಶ್ರೀ ಮೌಂಟಿ ಫರ್ನಾಂಡೀಸ್, ಕಾಂಗ್ರೆಸ್ ಹಿರಿಯ ಮುಖಂಡರು ಮಣಕಿ ಕುಮಟಾ ತಿಳಿಸಿದ ಶುಭ ಸಂದೇಶವನ್ನು ಶ್ರೀ ಕೆ.ಪಿ. ಭಂಡಾರಿ ಗುರುಗಳು ಓದಿ ಹೇಳಿದರು.

### ಮನುಜನೆದೆಗೆ ಶಾಂತಿ

ಮನುಜನೆದೆಯ ಗೂಡಲಿ ಮೂಡಿ ಬರಲಿ ಶಾಂತಿಯು
ಮಮತೆಯೆಂಬ ಬೀಜ ಮೊಳೆತು ಹಸಿರಾಗಲಿ ಭೂಮಿಯು ॥ಪ॥
ವಿಶ್ವಜನನಿ ಮಕ್ಕಳಾದ ನಮಗೆ ಭೇದವೇತಕೆ?
ಗಂಡು, ಹೆಣ್ಣು, ಮೇಲು, ಕೀಳು ಮತವು ನಡುವೆ ಏತಕೆ?
ಎಲ್ಲರೊಂದುಗೂಡಿ ಐಕ್ಯಪಥದಿ ಹೆಜ್ಜೆಹಾಕುವ
ಹಳೆಯ ಕೊಳೆಯ ತೊಳೆದು ಮತ್ತೆ ಹೊಸಬಾಳನು ಕಟ್ಟುವ
ಹಳೆಯ ಕೊಳೆಯ ತೊಳೆದು ಮತ್ತೆ ಹೊಸಬಾಳನು ಕಟ್ಟುವ ॥1॥
ಮನುಜನೆದೆಯ ಗೂಡಲಿ ಮೂಡಿ ಬರಲಿ ಶಾಂತಿಯು
ಮಮತೆಯೆಂಬ ಬೀಜ ಮೊಳೆತು ಹಸಿರಾಗಲಿ ಭೂಮಿಯು
ಸಮರತತ್ವ ಎಂದೂ ಬೇಡ ಸಮತೆಯಿಂದ ಸೇರುವ
ಮನುಜ ಮತಕೆ ಮಣಿದು ಎಲ್ಲ ಮನಸ್ಸುಗಳನು ಕಟ್ಟುವ
ದಿಶೆದಿಶೆಯಲಿ ಮೊಳಗುತಿರಲಿ ಶಾಂತಿ ಕಹಳೆನಾದವು
ವಶವಾಗಲಿ ಮಧುರ, ಪ್ರೀತಿ, ಸ್ನೇಹ ಒಲುಮೆ ನೋಟವು
ವಶವಾಗಲಿ ಮಧುರ, ಪ್ರೀತಿ, ಸ್ನೇಹ ಒಲುಮೆ ನೋಟವು ॥2॥
ಮನುಜನೆದೆಯ ಗೂಡಲಿ ಮೂಡಿ ಬರಲಿ ಶಾಂತಿಯು
ಮಮತೆಯೆಂಬ ಬೀಜ ಮೊಳೆತು ಹಸಿರಾಗಲಿ ಭೂಮಿಯು
ದ್ವೇಷ ಮರೆತು ಧೈರ್ಯದಿಂದ ಸತ್ಯದೆಡೆಗೆ ಸಾಗುವ
ದಯೆಯ ಮೂಲ ಅರಿತು ಎಲ್ಲ ಶಾಂತಿ ಮಂತ್ರ ಜಪಿಸುವ
ಅಮೃತ ನುಡಿಯ ಸುಧೆಯ ಹೊನಲು ಎಲ್ಲೆಡೆಗೆ ಹರಿಯಲಿ
ಆನಂದದ ಹಿಮ ಶಿಖರದಿ ಶಾಂತಿ ಧ್ವಜವು ಹಾರಲಿ
ಆನಂದದ ಹಿಮ ಶಿಖರದಿ ಶಾಂತಿ ಧ್ವಜವು ಹಾರಲಿ ॥3॥
ಮನುಜನೆದೆಯ ಗೂಡಲಿ ಮೂಡಿ ಬರಲಿ ಶಾಂತಿಯು
ಮಮತೆಯೆಂಬ ಬೀಜ ಮೊಳೆತು ಹಸಿರಾಗಲಿ ಭೂಮಿಯು ॥

**– ಕಮಲಾಕ್ಷಿ ಹೆಗಡೆ**

# ಶ್ರೀ ಬಿ.ಆರ್. ರಾಮಚಂದ್ರರಾವ್ ಕಾಳೆ

## ಹಿರಿಯ ಸ್ಕೌಟ್ -ಒಂದು ಪರಿಚಯ



ವೃತ್ತಿಯಿಂದ ದೈಹಿಕ ಶಿಕ್ಷಕರಾಗಿ, ಪ್ರವೃತ್ತಿಯಿಂದ ಸ್ಕೌಟ್ ಆಗಿ ಸೇವೆ ಸಲ್ಲಿಸುತ್ತಿರುವ ಶ್ರೀ ಬಿ.ಆರ್. ರಾಮಚಂದ್ರರಾವ್‌ಅವರು ಅಪ್ಪಟ ಗ್ರಾಮೀಣ ಪ್ರತಿಭೆ.

ಶ್ರೀ ಬಿ.ಜಿ ರಾಮನಾಥ್‌ರಾವ್ ಕಾಳೆ ಮತ್ತು ಶ್ರೀಮತಿ ಬಿ.ಎಂ. ಲಕ್ಷ್ಮೀಬಾಯಿ ಬೌಂಸ್ಲೆ ಇವರ ಪುತ್ರರಾಗಿ 1947 ಜನವರಿಯಲ್ಲಿ ಜನಿಸಿದರು. ಪಿ.ಯು.ಸಿಯ ನಂತರ ದೈಹಿಕ ಶಿಕ್ಷಕ ತರಬೇತಿ ಪಡೆದು ಬೆಂಗಳೂರಿನ ಶ್ರೀ ಸರಸ್ವತಿ ವಿದ್ಯಾಮಂದಿರದಲ್ಲಿ ಮತ್ತು ಬಿನ್ನಿಪೇಟೆಯ ಪೌಢಶಾಲೆಯಲ್ಲಿ ಶಿಕ್ಷಕರಾಗಿ ಕಾರ್ಯನಿರ್ವಹಿಸಿದರು. ವೃತ್ತಿಯ ಜೊತೆಗೆ ಪ್ರವೃತ್ತಿಯನ್ನು ಬೆಳೆಸಿಕೊಂಡರು. ಕುಸ್ತಿ, ಪಾಕಶಾಸ್ತ್ರ, ಪರ್ವತಾರೋಹಣ, ಚಾರಣ, ತೋಟಗಾರಿಕೆ ಮತ್ತು ಕೃಷಿ, ಪರಿಸರ ಮತ್ತು ಪ್ರವಾಸೋದ್ಯಮ ಶಿಬಿರಗಳ ಮೂಲಕ ಜನಜಾಗೃತಿ, ಮಕ್ಕಳಿಗೆ ತರಬೇತಿಯಲ್ಲಿ ಆದ್ಯತೆ, ಪರಿಸರ ಶಿಬಿರಗಳು, ಇವರ ಜೀವನ ಶೈಲಿಯ ಭಾಗವಾಯಿತು. ರಜೆ ದಿನಗಳಲ್ಲಿ ಗುಡ್ಡಗಾಡು ಜನರೊಡನೆ ಸಂಪರ್ಕ, ಅವರ ಜೀವನ ಶೈಲಿಯ ಅಧ್ಯಯನ, ಒಳ್ಳೆಯ ಧ್ಯೇಯೊದ್ದೇಶಗಳನ್ನುಳ್ಳ ಸಂಘಸಂಸ್ಥೆಗಳಡಿ, ಸಾಮಾಜಿಕ ಚಟುವಟಿಕೆಗಳಲ್ಲಿ ಭಾಗವಹಿಸುತ್ತಿದ್ದರು. ನಿವೃತ್ತಿಯ ನಂತರ ಸಾಹಸ, ಶಿಕ್ಷಣ, ದುರ್ಬಲವರ್ಗಗಳ ಹಿತರಕ್ಷಣೆಗಾಗಿ ಹೋರಾಟ, ಕನ್ನಡಪರ ಆಂದೋಲನಗಳಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಿದ್ದಾರೆ.

ಮೊದಲ ಬಾರಿಗೆ ಮೌಂಟ್ ಎವರೆಸ್ಟ್ ಶಿಖರವನ್ನು ಏರಿದ ಶ್ರೀ ತೇನ್‌ಸಿಂಗ್ ನೋರ್ಕೆ ಮತ್ತು ಎಡ್ಮಂಡ್ ಹಿಲರಿ ಅವರೊಂದಿಗೆ ಶಿಖರಾರೋಹಣದಲ್ಲಿ ಪಾಲ್ಗೊಂಡ ಸಂದರ್ಭವನ್ನು ನೆನೆಸಿಕೊಳ್ಳುವ ಶ್ರೀಯುತ ಕಾಳೆಯವರು ಭಾರತದ ಕಠಿಣ ಪರ್ವತ ಕಣಿವೆಗಳಲ್ಲಿ ಚಾರಣ ಮತ್ತು ಆರೋಹಣ ಮಾಡಿದ್ದಾರೆ. ಯುವಕರಾಗಿ ಸಾಹಸ ಕ್ರೀಡೆ, ನಾಯಕತ್ವ ತರಬೇತಿ ಮತ್ತು ಚಾರಣ ತರಬೇತಿಯನ್ನು ಏರ್ಪಡಿಸಿದ್ದಾರೆ.

ಜನವರಿ 1985ರಲ್ಲಿ "ಲಾಲ್‌ಬಹದ್ದೂರ್ ಮೌಂಟನಿಯರಿಂಗ ಇನ್ಸಿಟಿಟ್ಯೂಟ್" ಎಂಬ ಸಂಸ್ಥೆಯನ್ನು ಸ್ಥಾಪಿಸಿದ್ದಾರೆ. 1965 ರಲ್ಲಿ ಲಾಲ್‌ಬಹುದ್ದೂರ್ ಸ್ಕೌಟ್ಸ್ ಮತ್ತು ಗೈಡ್ಸ್ ಶಾಖೆಯನ್ನು ಬೆಂಗಳೂರಿನ ಮಾವಳ್ಳಿಯಲ್ಲಿ ಸ್ಥಾಪಿಸಿದ್ದರು.

**ಪ್ರಶಸ್ತಿಗಳು:**

ರಾಷ್ಟ್ರಪತಿ ರೋವರ್ ಪ್ರಶಸ್ತಿ, ರಾಷ್ಟ್ರಪತಿ ಪುರಸ್ಕಾರ, ನಾಡಪ್ರಭು ಕೆಂಪೇಗೌಡ ಪ್ರಶಸ್ತಿ, ಕುವೆಂಪು ವಿಚಾರವೇದಿಕೆ ಸನ್ಮಾನ., ನಗರಪಾಲಿಕೆ ಪದಕ, ಕರ್ನಾಟಕ ಕಲಾ ಭೂಷಣ ಪ್ರಶಸ್ತಿ, ಗೊರೂರು ಸಾಹಿತ್ಯ ಪ್ರಶಸ್ತಿ ಕರ್ನಾಟಕ ಸಾಂಸ್ಕೃತಿಕ ಅಕಾಡಮಿಯಿಂದ ಸಮಾಜ ಸೇವಾ ಪ್ರಶಸ್ತಿ ಮುಂತಾದ ಪ್ರಶಸ್ತಿಗಳನ್ನು ಪಡೆದಿದ್ದಾರೆ.

ಇದಲ್ಲದೆ ಕರ್ನಾಟಕ ಪರ್ವತಾರೋಹಣ ಪರಿಷತ್, ಸೇವಾದಳ, ನೆಹರು ಮೌಂಟನಿಯರಿಂಗ್ ಇನ್ಸ್‌ಟಿಟ್ಯೂಟ್, ಎನ್.ಎಸ್.ಎಸ್, ಸೆಂಟ್ ಜಾನ್ ಆಂಬ್ಯುಲೆನ್ಸ್, ಕರ್ನಾಟಕ ಅಮೆಚ್ಯೂರ್ ಅಥ್ಲೆಟಿಕ್ಸ್ ಸಂಸ್ಥೆ, ಬೆಳ್ನೀರಿನ ಸಾಹಸ ಕ್ರೀಡಾ ಸಂಸ್ಥೆ, ಇಂಡಿಯನ್ ಚಿಲ್ಡ್ರನ್ ಕ್ಯಾಮರಾಕ್ಲಬ್, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಯೂತ್ ಹಾಸ್ಟಲ್ ಆಫ್ ಇಂಡಿಯಾ, ಆರ್ಯಸಮಾಜ, ಮೈಸೂರು ಉದ್ಯಾನ ಕಲಾಸಂಘ, ಕನ್ನಡ ಸಾಹಿತ್ಯ ಪರಿಷತ್ ಮುಂತಾದ ಸಂಸ್ಥೆಯಲ್ಲಿ ಸಕ್ರಿಯರಾಗಿದ್ದಾರೆ ಜೊತೆಗೆ ಹಲವಾರು ಸಾಮಾಜಿಕ ಕಾರ್ಯಗಳಲ್ಲಿ ತೊಡಗಿಸಿಕೊಂಡಿದ್ದಾರೆ.

"ಪ್ರಥಮ ಚಿಕಿತ್ಸೆ", "ಹಿಮಾಲಯ ದರ್ಶನ", "ಶತಶೃಂಗಗಳ ಪರಿಚಯ", "ಸಾಹಸಕೈಪಿಡಿ" ಮೊದಲಾದ ಉಪಯುಕ್ತ ಕೃತಿಗಳನ್ನು ಪ್ರಕಟಿಸಿದ್ದಾರೆ.

ಶ್ರೀ ರಾಮಚಂದ್ರರಾವ್ ಕಾಳೆ ಅವರು ಸ್ಫೂರ್ತಿದಾಯಕ ವ್ಯಕ್ತಿತ್ವ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯ ನೇತಾರರಾಗಿ ಅನುಕರಣೀಯರಾಗಿದ್ದಾರೆ.

# Gone Home – ಶ್ರದ್ಧಾಂಜಲಿ



Smt Indira Deenadayalu Naidu wife of Late V.P.Deenadayalu Naidu passed away on 8th Jan' 2018 at Bengaluru.

She was aged 91 years. She was involved in many social activities. She leaven behind son Sri D. Venkatesh, A.S.C. Bharat Scouts & Guides, Karnataka, Daughter-in-law, two daughter, Grand Children and lot of Relatives and Friends.

We pray the almighty to give strength and Courage to the Family Members of the departed Soul to bear the loss. **May her Soul Rest in Peace.**



ಶ್ರೀಮತಿ ಮೃದುಲಾ ಆಚಾರಿ ಮುರುಡೇಶ್ವರದಲ್ಲಿ ಆಕಸ್ಮಿಕ ಅಪಘಾತವೊಂದರಲ್ಲಿ ಇತ್ತೀಚೆಗೆ ನಿಧನರಾದರು. ಇವರು ಕಾರವಾರ ಜಿಲ್ಲೆಯ ಗೈಡ್ ವಿಭಾಗದಲ್ಲಿ ರಾಷ್ಟ್ರಪತಿ ಗೈಡ್ ಆಗಿ ಕಾರವಾರ ಜಿಲ್ಲೆಯ ಸ್ಕೌಟ್ಸ್-ಗೈಡ್ಸ್ ಕಾರ್ಯಕ್ರಮಗಳಲ್ಲಿ ಹಲವಾರು ವರ್ಷಗಳ ತನಕ ಕರ್ತವ್ಯ ನಿರ್ವಹಿಸಿದ್ದರು. ಇವರು ಸಧ್ಯ ಮುರಡೇಶ್ವರದಲ್ಲಿ ಅರಕ್ಷಕಠಾಣೆಯಲ್ಲಿ ಎ.ಎಸ್.ಐ., ಆಗಿ ಕರ್ತವ್ಯ ನಿರ್ವಹಿಸುತ್ತಿದ್ದರು. ಇವರ ಆತ್ಮಕ್ಕೆ ಶಾಂತಿ ಸಿಗಲೆಂದು ಹಾಗು ಇವರ ಕುಟುಂಬಕ್ಕೆ ದುಃಖ ಭರಿಸುವ ಶಕ್ತಿಯನ್ನು ನೀಡಲೆಂದು ಭಗವಂತನಲ್ಲಿ ಪ್ರಾರ್ಥಿಸುತ್ತೇವೆ.



ಶ್ರೀ ಅನಿಲ ಕುಲಕರ್ಣಿ (ಶ್ರೀಮತಿ ಶೋಭಾಕುಲಕರ್ಣಿ, ಜಿಲ್ಲಾ ಆಯುಕ್ತರು, ಕಾರವಾರ ಇವರ ಪತಿ) ಇವರು ಹೊನ್ನಾವರದಲ್ಲಿ ನಿಧನರಾದರು ಇವರಿಗೆ 68 ವರ್ಷ ವಯಸ್ಸಾಗಿತ್ತು. ಇವರು ಸಮಾಜ ಸೇವಕರು ಹಾಗು ಸ್ಕೌಟ್ಸ್ ಸಂಸ್ಥೆಗೆ ಕೊಡುಗೆ ದಾನಿಗಳಾಗಿದ್ದರು. ಇವರ ಆತ್ಮಕ್ಕೆ ಶಾಂತಿ ನೀಡಲೆಂದು ಹಾಗು ಇವರ ಕುಟುಂಬಕ್ಕೆ ದುಃಖ ಭರಿಸುವ ಶಕ್ತಿಯನ್ನು ನೀಡಲೆಂದು ಭಗವಂತನಲ್ಲಿ ಪ್ರಾರ್ಥಿಸುತ್ತೇವೆ.



ಶ್ರೀಮತಿ ಡಿ.ಎ. ನದಾಫ, ಹೆಚ್.ಡಬ್ಲ್ಯೂ.ಬಿ. (ಫ್ಲಾಕ್) ಇವರು 22-12-2017 ರಂದು ಬೆಳಗಾವಿ ನಗರದ ವಂಟಮೂರಿ ಕಾಲನಿಯಲ್ಲಿ ನಿಧನರಾದರು. ಇವರು ಸರಕಾರಿ ಕನ್ನಡ ಹಿರಿಯ ಪ್ರಾಥಮಿಕ ಶಾಲೆ ನಂ. 7, ಘುಲ್‌ಭಾಗ ಗಲ್ಲಿ ಇಲ್ಲಿ ಪ್ರಭಾರಿ ಪ್ರಧಾನ ಗುರುಮಾತೆಯರಾಗಿ ಸೇವೆ ಸಲ್ಲಿಸುತ್ತಿದ್ದರು. 2015-16 ರಲ್ಲಿ ಸ್ಕೌಟ್-ಗೈಡ್ ಸಂಸ್ಥೆಯಿಂದ ನೀಡಿದ ಉತ್ತಮ ಗೈಡರ್ ಪ್ರಶಸ್ತಿಗೆ ಭಾಜನರಾಗಿದ್ದರು. 5 ವರ್ಷಗಳ ಕಾಲ ಬೆಳಗಾವಿ ನಗರ, ಸ್ಥಳೀಯ ಸಂಸ್ಥೆಯಲ್ಲಿ ಜಂಟಿ ಕಾರ್ಯದರ್ಶಿ (ಗೈಡ್) ಯಾಗಿ ಕಾರ್ಯನಿರ್ವಹಿಸಿದ್ದರು. ಮೃತರು ನಮ್ಮ ಜಿಲ್ಲಾ ಸಂಸ್ಥೆಯ ಕಾರ್ಯದರ್ಶಿ ಶ್ರೀ ಎಸ್.ಎಂ. ನದಾಫ, ಇವರ ಧರ್ಮ ಪತ್ನಿ. ಇವರ ಆತ್ಮಕ್ಕೆ ಶಾಂತಿ ನೀಡಲೆಂದು ಹಾಗು ಇವರ ಕುಟುಂಬಕ್ಕೆ ದುಃಖ ಭರಿಸುವ ಶಕ್ತಿಯನ್ನು ನೀಡಲೆಂದು ಭಗವಂತನಲ್ಲಿ ಪ್ರಾರ್ಥಿಸುತ್ತೇವೆ.

– ರಾಜ್ಯ ಕಾರ್ಯದರ್ಶಿ




ಜನವರಿ 22ರಂದು ಶಾಂತಿಗೃಹದಲ್ಲಿ ಜರುಗಿದ "ಮಕರ ಸಂಕ್ರಾಂತಿಯ ಸೊಗಡು ಸಂಭ್ರಮ" ಸಮಾರಂಭದಲ್ಲಿ ಶ್ರೀ ಎಂ.ಎಸ್. ನರಸಿಂಹಮೂರ್ತಿ, ಹಾಸ್ಯ ಸಾಹಿತಿಗಳು, ಶ್ರೀ ಓ. ಮೋಹನ್ ಕುಮಾರ್, ಕಾರ್ಯದರ್ಶಿ, ನಿರ್ಮಾಣ್ ಇಂಟರ್ ನ್ಯಾಷನಲ್‌ಪಬ್ಲಿಕ್ ಸ್ಕೂಲ್, ಡಾ. ಕೆ. ರಮೇಶ್ ಕಾಮತ್, ನಿವೃತ್ತ ನಿರ್ದೇಶಕರು, ಜವಹರಲಾಲ್‌ನೆಹರು ತಾರಾಲಯ, ಶ್ರೀ ಪಿ.ಜಿ.ಆರ್. ಸಿಂಧ್ಯ, ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ಶ್ರೀಮತಿ ಬಿ.ವಿ. ರಾಮರತ್ನ, ಶ್ರೀ ಎಂ.ಎಸ್. ಸತೀಶ್, ಶ್ರೀಮತಿ ಕಮಲಾಕ್ಷಿ ಹೆಗಡೆ ಹಾಗೂ ಇತರರು ಚಿತ್ರದಲ್ಲಿದ್ದಾರೆ.



ಡಿಸೆಂಬರ್ 20, 2017ರಂದು ಮೈಸೂರು ಜಿಲ್ಲಾ ಸಂಸ್ಥೆ ಆಶ್ರಯದಲ್ಲಿ ಜರುಗಿದ 'ಸರ್ಫ್-ಸ್ಮಾರ್ಟ್' ಕಾರ್ಯಕ್ರಮದ ಉದ್ಘಾಟನೆಯನ್ನು ಶ್ರೀ ಪಿ. ವಿಶ್ವನಾಥ್, ಡಿಸಿಸಿ ನೆರವೇರಿಸಿದರು. ಡಾ. ಕೆ.ಬಿ. ಗುರುಮೂರ್ತಿ, ಶ್ರೀ ಅಜೇಯ್ ಕುಮಾರ್ ಜೈನ್ ಮತ್ತು ಇತರರು ಚಿತ್ರದಲ್ಲಿದ್ದಾರೆ.



ಕೋಲಾರ ಜಿಲ್ಲೆ ಬಂಗಾರಪೇಟೆ ತಾಲ್ಲೂಕಿನ ಹಂಚಾಳಗೇಟ್ ಫೀಲ್ಡ್ ಮಾರ್ಷಲ್ ಕೆ.ಎಂ. ಕಾರಿಯಪ್ಪ ಶಾಲೆಯಲ್ಲಿ ಜರುಗಿದ "ರಾಷ್ಟ್ರೀಯ ಯುವ ದಿನಾಚರಣೆ" ಕಾರ್ಯಕ್ರಮದಲ್ಲಿ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಕೆ.ವಿ. ಶಂಕರಪ್ಪ ಮತ್ತು ಜಿಲ್ಲಾ ಹಾಗೂ ಸ್ಥಳೀಯ ಸಂಸ್ಥೆ ಪದಾಧಿಕಾರಿಗಳು ಚಿತ್ರದಲ್ಲಿದ್ದಾರೆ.



ಡಿಸೆಂಬರ್ 21, 2017ರಂದು ರಾಯಚೂರಿನಲ್ಲಿ ನಡೆದ ಜಿಲ್ಲಾ ಮಟ್ಟದ ಸ್ಕೌಟರ್ಸ್-ಗೈಡರ್ಸ್ ಸಮಾವೇಶವನ್ನು ಸಾ.ಶಿ. ಇಲಾಖೆ ಉಪನಿರ್ದೇಶಕರಾದ ಶ್ರೀ ಬಿ.ಕೆ. ನಂದನೂರ ಉದ್ಘಾಟಿಸಿದರು. ಶ್ರೀ ಕೆ. ತಿಮ್ಮಯ್ಯ, ಡಿಸಿ.ಸಿ., ಶ್ರೀ ಬಸವರಾಜ ಬೋರೆಡ್ಡಿ, ಡಿ.ಸಿ.(ಸ್ಕೌ), ಶ್ರೀಮತಿ ಕೆ. ಆಲಿಯಾ ಖಾನಂ, ಡಿ.ಸಿ(ಗೈ), ಶ್ರೀ ಅಮರೇಗೌಡ ಪಾಟೀಲ್ ಹಾಗೂ ಇತರರು ಚಿತ್ರದಲ್ಲಿದ್ದಾರೆ.



ಜನವರಿ 16 ರಿಂದ 18 ರವರೆಗೆ ಕೊಪ್ಪಳ ಜಿಲ್ಲೆ ಯಲಬುರ್ಗಾ ತಾ॥ ಜವಾಹರ್ ನವೋದಯ ವಿದ್ಯಾಲಯ, ಕುಕನೂರ ಇಲ್ಲಿ ಜರುಗಿದ ಜಿಲ್ಲಾ ಮಟ್ಟದ ತೃತೀಯ ಸೋಪಾನ ಪರೀಕ್ಷಾ ಶಿಬಿರ ಉದ್ಘಾಟನೆಯನ್ನು ಉಪ ಪ್ರಾಚಾರ್ಯರಾದ ಶ್ರೀಮತಿ ವಿ. ಆಂಟೋನಿ ಅವರು ನೆರವೇರಿಸಿದರು. ಶ್ರೀ ಹೆಚ್.ಎಂ. ಸಿದ್ದರಾಮ ಸ್ವಾಮಿ, ಡಿಸಿಸಿ, ಶ್ರೀ ಮಲ್ಲಿಕಾರ್ಜುನ್ ಚೌಕಿಮಠ ಡಿ.ಸಿ.(ಎಸ್) ಶ್ರೀಮತಿ ಅರುಣಾ ವಸ್ತ್ರದ, ಡಿಸಿ(ಜಿ), ಶ್ರೀ ವ್ಹಾ. ಸುದರ್ಶನ್‌ರಾವ್, ಜಿಲ್ಲಾ ಕಾರ್ಯದರ್ಶಿ ಹಾಗೂ ಇತರರು ಚಿತ್ರದಲ್ಲಿದ್ದಾರೆ.



ಡಿಸೆಂಬರ್ 16, 2017ರಂದು ಚಿತ್ರದುರ್ಗ ಜಿಲ್ಲಾ ಸಂಸ್ಥೆ ಆಶ್ರಯದಲ್ಲಿ ನಡೆದ "ಸರ್ಫ್-ಸ್ಮಾರ್ಟ್" ಕಾರ್ಯಕ್ರಮದ ಉದ್ಘಾಟನಾ ಸಮಾರಂಭದಲ್ಲಿ ಜಿಲ್ಲಾ ಮುಖ್ಯ ಆಯುಕ್ತ ಹಾಗೂ ಉಪನಿರ್ದೇಶಕರಾದ ಶ್ರೀ ಎಂ. ರೇವಣಸಿದ್ದಪ್ಪ, ಜಿಲ್ಲಾ ಕಾರ್ಯದರ್ಶಿ ಶ್ರೀ ಬಿ.ಎ. ಲಿಂಗಾರೆಡ್ಡಿ, ಶ್ರೀಮತಿ ಸುನೀತ ಮಲ್ಲಿಕಾರ್ಜುನ್, ಜಿಲ್ಲಾ ಆಯುಕ್ತರು(ಗೈ) ಹಾಗೂ ಇತರರು ಚಿತ್ರದಲ್ಲಿದ್ದಾರೆ.

Regd. as News Paper (Magazine) RNI No: 13348/1959. Postal Regd. No. KA/BGGPO/2580/2018-20
Licensed to Post Without Prepayment License WPP NO. 340, Date of Publishing 28th of Every Month
Posted at: Bengaluru PSO, Mysore Road, Bengaluru-26 on 28 or 30 every Month (No. of Pages: 36)

# ವಿವಿಧ ಜಿಲ್ಲೆಗಳಲ್ಲಿ ಜರುಗಿದ ಸ್ವಚ್ಛಭಾರತ ಅಭಿಯಾನ ಹಾಗೂ ಸೈಕಲ್ ಜಾಥಾ ಕಾರ್ಯಕ್ರಮಗಳು



ಕೋಲಾರ


ಚಾಮರಾಜನಗರ


ತುಮಕೂರು


ಶಿವಮೊಗ್ಗ


ಬೆಳಗಾವಿ


ವಿಜಯಪುರ



If not delivered, please return to :
**THE EDITOR, Karnataka Scout & Guide**
State Headquarters, Shanthi Gruha
#39, Palace Road, Bengaluru - 560 001
Ph.: 080-22260017
e-mail.: shq@bsgkarnataka.org
editor@bsgkarnataka.org
www.bsgkarnataka.org

**Published by : The Bharat Scouts & Guides, Karnataka, State Headquarters**
**Shanthi Gruha,** #39, Palace Road, Bengaluru - 560 001. **Publisher & Editor : Siddaiah,** IAS (Retd.)
**Printed by : L. Lingappa, M.D. at Sathyasri Printers Pvt. Ltd.,** 16/1, 3rd Cross, 2nd Main, Kasturiba Nagar, Mysore Road, Bengaluru-26